# ಮಹಾಮನೆ



ಸಂಪುಟ : ೮ ಸೆಪ್ಟಂಬರ್ ೨೦೦೫ ಸಂಚಿಕೆ : ೨ ಬೆಲೆ : ರೂ. ೧೫/-

## ಮೂರು ಸಾರ್ಥಕ ಗ್ರಂಥಗಳ ಬಿಡುಗಡೆ



ಅಲಹಾಬಾದ್ ಮತ್ತು ಕರ್ನಾಟಕ ಮುಖ್ಯ ನ್ಯಾಯಾಲಯಗಳ ಮುಖ್ಯನ್ಯಾಯಮೂರ್ತಿಗಳಾಗಿದ್ದ ಲಿಂ. ಡಿ.ಎಂ. ಚಂದ್ರಶೇಖರ್ ಅವರ ಸ್ಮರಣೆಯ ಮೂರು ಗ್ರಂಥಗಳು ಶಿವರಾತ್ರೀಶ್ವರ ಕೇಂದ್ರದಲ್ಲಿ ದಿ. 31-7-2005ರಂದು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಸಹಯೋಗದಲ್ಲಿ ಬಿಡುಗಡೆಯಾದವು. ಲಿಂ. ಡಿ.ಎಂ. ಚಂದ್ರಶೇಖರ್ ಸ್ಮರಣ ಗ್ರಂಥ ಸಮಿತಿ ಬಿಡುಗಡೆ ಸಮಾರಂಭ ಏರ್ಪಡಿಸಿತ್ತು. ವೇದಿಕೆಯಲ್ಲಿ : ಸ್ಮರಣ ಗ್ರಂಥ ಸಮಿತಿ ಗೌರವಾಧ್ಯಕ್ಷ ನ್ಯಾಯಮೂರ್ತಿ ಡಾ. ವಿ.ಎಸ್. ಮಳೀಮಠ, ಗ್ರಂಥಗಳನ್ನು ಬಿಡುಗಡೆ ಮಾಡಿದ ಭಾರತದ ಸರ್ವೋಚ್ಚ ನ್ಯಾಯಾಲಯದ ಹಿರಿಯ ನ್ಯಾಯವಾದಿ ಶ್ರೀ ಎಫ್.ಎಸ್. ನಾರಿಮನ್, ಅಧ್ಯಕ್ಷತೆ ವಹಿಸಿದ್ದ ಕೇಂದ್ರ ಯೋಜನಾ ರಾಜ್ಯ ಸಚಿವ ಶ್ರೀ ಎಂ.ವಿ. ರಾಜಶೇಖರನ್, ಸ್ಮರಣ ನುಡಿ ಗೌರವ ಸಲ್ಲಿಸಿದ ಜಾರ್ಖಂಡ್ ಮತ್ತು ಬಿಹಾರದ ಮಾಜಿ ರಾಜ್ಯಪಾಲ ಶ್ರೀ ಎಂ. ರಾಮಾಜೋಯಿಸ್ ಮತ್ತು ಸ್ಮರಣ ಗ್ರಂಥ ಸಮಿತಿ ಅಧ್ಯಕ್ಷ ಕೋ. ಚನ್ನಬಸಪ್ಪ

(ವರದಿ : ಪುಟ-೧೫)




- ಅನುಭವ ಮಂಟಪ ಮತ್ತು ಜಾನಪದ ಸಂಬಂಧ
- ಜೀವೋತ್ಪಾದನೆಯ ಮೂಲ
- ಮುಳ್ಳಾಗದಿರುವಿಕೆ
- ತೀರ್ಪು-ನ್ಯಾಯ-ಮಾನವೀಯತೆ

## ಮನವಿ

### ಲೇಖಕರಲ್ಲಿ ಬಿನ್ನಹ

- 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ - ಸಂಸ್ಕೃತಿಗೆ ಸಂಬಂಧಿಸಿದ ಉಪಯುಕ್ತ ಲೇಖನಗಳನ್ನು ಪ್ರಕಟಿಸಲಾಗುತ್ತದೆ.
- ಶರಣ ಕ್ಷೇತ್ರ ಪರಿಚಯ, ಶರಣ ಸಾಹಿತಿಗಳ ಪರಿಚಯ, ಶರಣ ಸಾಹಿತ್ಯ ಕೃತಿಗಳ ಪರಿಚಯದ ಲೇಖನಗಳು 'ಮಹಾಮನೆ'ಯ ಎರಡು ಪುಟಗಳಿಗೆ ಮೀರಬಾರದು.
- ವಿಷಯ ವಿಶ್ಲೇಷಣೆ ಅಥವಾ ವ್ಯಾಖ್ಯಾನ ಸಂಬಂಧ ಲೇಖನಗಳು ಮುದ್ರಿತ ೩-೪ ಪುಟಗಳಿಗೆ ಮೀರಬಾರದು.
- ವಚನ ಸಾಹಿತ್ಯ ಅಥವಾ ಶರಣರ ಜೀವನವನ್ನು ಪ್ರತಿಬಿಂಬಿಸುವ ರೇಖಾ ಚಿತ್ರಗಳಿಗೆ ಅವಕಾಶವುಂಟು.
- ಶರಣ ಕ್ಷೇತ್ರ ಅಥವಾ ಶರಣ ಸಾಹಿತಿಗಳನ್ನು ಕುರಿತ ಲೇಖನಗಳೊಡನೆ ಸಂಬಂಧಪಟ್ಟ ಛಾಯಾಚಿತ್ರಗಳನ್ನು ಕಳುಹಿಸುವುದು ಅಪೇಕ್ಷಣೀಯ.
- ಲೇಖನಗಳನ್ನು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಬೇಕು; ಅಕ್ಷರಗಳು ಸ್ಫುಟವಾಗಿರಬೇಕು.
- ಆಧುನಿಕ ವಚನಕಾರರು ತಮ್ಮ ಹೊಸ ವಚನಗಳನ್ನು ಪ್ರಕಟಣೆಗೆ ಕಳುಹಿಸಬಹುದು.

### ಅನುಭವ ಮಂಟಪ

- ಮಹಾಮನೆಯ ಈ ಅಂಕಣದಲ್ಲಿ ಪ್ರಶ್ನೋತ್ತರಗಳಿಗೆ ಅವಕಾಶ ಕಲ್ಪಿಸಲಾಗಿದೆ. ಇದೊಂದು ಮುಕ್ತ ವಿಚಾರ ವಿನಿಮಯ.
- ಪ್ರಶ್ನೆಗಳು ಗಂಭೀರವಾಗಿರಬೇಕು. ಮುಖ್ಯವಾಗಿ ಶರಣ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿರಬೇಕು. ಪ್ರಶ್ನೆಗಳು ಸ್ಪಷ್ಟ ಹಾಗೂ ಸಂಕ್ಷಿಪ್ತವಾಗಿರಬೇಕು.
- ವೈಯಕ್ತಿಕ ವಿಷಯಗಳ ಪ್ರಸ್ತಾಪಕ್ಕೆ ಅವಕಾಶವಿಲ್ಲ. ಪ್ರಶ್ನೆಗಳಲ್ಲಿ ಸಾಮೂಹಿಕ ಹಿತದೃಷ್ಟಿಯಿರಬೇಕು.
- ವರ್ಷದ ಕೊನೆಯಲ್ಲಿ ಆಯ್ದ ಪ್ರಶ್ನೋತ್ತರಗಳಿಗೆ ಒಂದು ಸಂಗ್ರಹವನ್ನು ಗ್ರಂಥ ರೂಪದಲ್ಲಿ ತರುವ ವಿಚಾರವಿದೆ.
- ಶರಣ ಸಿದ್ಧಾಂತದ ತಾಂತ್ರಿಕ ಅಂಶಗಳಿಗೆ ಸಂಬಂಧಿಸಿದಂತೆಯೂ ಪ್ರಶ್ನೆಗಳನ್ನು ಕೇಳಬಹುದು.
- ಪ್ರಶ್ನೆಗಳನ್ನು ಒಂದು ಅಂಚೆ ಕಾರ್ಡಿನಲ್ಲಿ ಬರೆದು ಕಳುಹಿಸಿದರೆ ಸಾಕು. ಪ್ರಶ್ನೆ ಕೇಳುವವರು ತಮ್ಮ ಪೂರ್ಣ ಅಂಚೆ ವಿಳಾಸ ತಿಳಿಸಬೇಕು.

## ಗ್ರಂಥ ವಿಮರ್ಶೆ

- 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ ಮತ್ತು ಸಂಬಂಧಿಸಿದ ಹೊಸ ಪ್ರಕಟಣೆಗಳ ಸಾದರ ಸ್ವೀಕಾರಕ್ಕೆ ಅವಕಾಶವುಂಟು. ಅಂಕಣದ ಪ್ರಕಟಣೆಗೆ ಲೇಖಕರು / ಪ್ರಕಾಶಕರು ತಮ್ಮ ಕೃತಿಗಳ ಒಂದೊಂದು ಪ್ರತಿಯನ್ನು ಕಳುಹಿಸಬೇಕು.
- ವಿಮರ್ಶೆಗಾದರೆ ಪ್ರತಿಯೊಂದು ಕೃತಿಯ ಎರಡೆರಡು ಪ್ರತಿಗಳನ್ನು ಕಳುಹಿಸಬೇಕು. ಅಂತಹ ಕೃತಿಯ ಶೀರ್ಷಿಕಾ ಪುಟದಲ್ಲಿ "ವಿಮರ್ಶೆಯ ಕೃಪೆಗಾಗಿ" ಎಂದು ಬರೆದಿರಬೇಕು.

ವಿ.ಸೂ. ಲೇಖಕರು / ಪ್ರಕಾಶಕರು ಶರಣ ಸಾಹಿತ್ಯ ಪರಿಷತ್ತಿಗೆ ಕಳುಹಿಸುವ ಕೃತಿಗಳನ್ನು ಪರಿಷತ್ತಿನ ಸಾಹಿತ್ಯ ಭಂಡಾರದಲ್ಲಿಟ್ಟು ಓದುಗರಿಗೆ ಆಕರ ಸೌಲಭ್ಯ ಒದಗಿಸಲಾಗುತ್ತದೆ.

ಶರಣ ಸಾಹಿತ್ಯಕ್ಕೆ ಯಾವುದೇ ಕೃತಿಯನ್ನು (ಹಳೆಯದಿರಲಿ, ಹೊಸದಿರಲಿ, ಹಸ್ತಪ್ರತಿಯಿರಲಿ) ಕೊಡುಗೆಯಾಗಿ ಶರಣ ಪರಿಷತ್ತಿನ ಭಂಡಾರಕ್ಕೆ ಕಳುಹಿಸಬಹುದು.

ಸಂಪರ್ಕ ವಿಳಾಸ : ಸಂಪಾದಕರು, 'ಮಹಾಮನೆ', ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ೧ನೆಯ ಮುಖ್ಯರಸ್ತೆ, ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦ ೦೭೦



# ಮಹಾಮನೆ

ಸಂಪುಟ : ೮ ಸೆಪ್ಟಂಬರ್ ೨೦೦೫ ಸಂಚಿಕೆ : ೨


ಅಧ್ಯಕ್ಷರು :
ಗೊ.ರು. ಚನ್ನಬಸಪ್ಪ
ಸಂಪಾದಕರು :
ಎಂ.ಜಿ. ನಾಗರಾಜ್
ಎಚ್.ಎಸ್. ಸಿದ್ಧಗಂಗಪ್ಪ
ಪ್ರಕಾಶಕರು :
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

ಆಡಳಿತ ಮಂಡಳಿ

೧ನೆಯ ಮುಖ್ಯರಸ್ತೆ, ೮ನೆಯ ವಿಭಾಗ
ಶಿವರಾತ್ರೀಶ್ವರ ವೃತ್ತ
ಜಯನಗರ, ಬೆಂಗಳೂರು - ೫೬೦ ೦೭೦
ದೂರವಾಣಿ : ೨೬೫೪ ೯೩೫೪
ಮುದ್ರಕರು :
ಲಕ್ಷ್ಮಿ ಮುದ್ರಣಾಲಯ
೫ನೆಯ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮
ದೂರವಾಣಿ : ೨೬೬೧ ೩೧೨೩


*ಲೇಖಕರ ಅಭಿಪ್ರಾಯಗಳೆಲ್ಲ ಪರಿಷತ್ತಿನ ಅಭಿಪ್ರಾಯಗಳಲ್ಲ*

## ಬಾಗಿಲು ತೆರೆದರೆ......



## 'ಮಹಾಮನೆ'ಯ ಬಾಗಿಲು ತೆರೆದರೆ......

- *ಅಧ್ಯಕ್ಷರ ನುಡಿ, ಸಂಪಾದಕೀಯ ಬರಹಗಳು*
- *ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕೇಂದ್ರ ಚಟುವಟಿಕೆಗಳು*
- *ಶರಣ ಸಾಹಿತ್ಯ ಕೃತಿಗಳು ಮತ್ತು ಶರಣ ಕ್ಷೇತ್ರಗಳ ಪರಿಚಯ*
- *ಶರಣ ಸಾಹಿತ್ಯದಲ್ಲಿ ಕ್ಷೇತ್ರ ದುಡಿದ, ದುಡಿಯುತ್ತಿರುವ ಮಹನೀಯರ ಪರಿಚಯ*
- *ಆಯ್ದ ವಚನಗಳು ಮತ್ತು ಅವುಗಳ ವಿಶ್ಲೇಷಣೆ*
- *ಶರಣ ಸಾಹಿತ್ಯ - ಸಂಸ್ಕೃತಿಗಳಿಗೆ ಸಂಬಂಧಿಸಿದ ಹೊಸ ಶೋಧಗಳು*
- *ಶರಣ ಸಾಹಿತ್ಯ ಕೃತಿಗಳ ಸಾದರ ಸ್ವೀಕಾರ ಮತ್ತು ವಿಮರ್ಶೆ*
- *ಶರಣ ಸಾಹಿತ್ಯ ಕುರಿತ ಪ್ರೌಢ ಲೇಖನಗಳು*
- *ಆಧುನಿಕ ವಚನಕಾರರ ಹೊಸ ವಚನಗಳು*
- *ಓದುಗರೊಡನೆ ಸಂವಾದ - ಪ್ರಶ್ನೋತ್ತರ ವೇದಿಕೆ*
- *ಶರಣ ಸಿದ್ಧಾಂತ - ತಾಂತ್ರಿಕ ಅಂಶಗಳ ವ್ಯಾಖ್ಯಾನ - ಇತ್ಯಾದಿ*

# ಮಾನಸಕ್ಕೆ ಮುದ

ಮಾನಸಕ್ಕೆ ಮುದ ಕೊಡುವುದು ಹಬ್ಬವೂ ಹೌದು. ಅದು ಮನಸ್ಸಿನ ಆಸೆಯೆ. ಕೆಡುಕುಗಳನ್ನು ತವಿದು ಒಳಿತನ್ನು ಕಟ್ಟಿಕೊಡುವ ಸಂತೋಷವೂ ಹಬ್ಬವೆ. ಪರ್ವ ಎನ್ನಿರಿ, ಗ್ರಾಮೀಣರ 'ಪರ' ಎನ್ನಿರಿ, ಅದು ದೇವನೆಲೆಯ ಬಳಿಯ ದಾಸೋಹ. ಅಲ್ಲಿ ಶಿವಸನ್ನಿಧಿ ಎಂಬುದು ಸತತ ಭಾವ. ಅದು ಪ್ರಸಾದ ಭಾವವೂ ಆಗಿದೆ. ಆ 'ಪರ' ಬರಿ 'ಊಟ'ವಲ್ಲ, ಕೇವಲ ವನಭೋಜನವಲ್ಲ. ದೇವರ ಮೀಸಲು ಮಡೆ, ಪ್ರಸಾದವಾಗಿ ದಕ್ಕುತ್ತದೆ.

ಮನಕ್ಕಲ್ಲದೆ ಮೆದುಳಿಗೂ ತೃಪ್ತಿ ತರುವ ಪ್ರಸಾದ ವೈಜ್ಞಾನಿಕವೆನ್ನಬಹುದು. ಇಲ್ಲಿ ನಾಲಗೆಗೆ ರುಚಿಯಲ್ಲದೆ, ದೇಹಾರೋಗ್ಯಕ್ಕೂ ಒಗ್ಗುವ ಪ್ರಸಾದದ ಒಕ್ಕಣೆ ಇರುತ್ತದೆ. ಪೋಷಕಾಂಶದ ಸಿರಿ ಇರುತ್ತದೆ. ಆಹಾರ ಹೀಗೆ ತೃಪ್ತಿ, ಪೋಷಕತೆ, ಪಾವಿತ್ರ್ಯದ ಸಂಗಮವಾದರೆ, ಮಾನಸ ಪ್ರಫುಲ್ಲವಾಗುತ್ತದೆ. ಸಾತ್ವಿಕ, ತಾಮಸ ಎಂದು ಆಹಾರ ಪದ್ಧತಿಯನ್ನು ವಿಂಗಡಣೆ ಮಾಡಿದರೂ, ಪ್ರಸಾದವಾಗಿ ಪರಿವರ್ತಿತವಾದಾಗ ದೇವಾರ್ಪಿತವೆಂದಾಗುತ್ತದೆ. ತಾನು ತಿನ್ನುವಲ್ಲಿ ದೇವರಿಗೆ ಮೊದಲು ಅರ್ಪಿಸಿ ತಿನ್ನಬೇಕು, ಎಂಬ ಮೌಲಿಕ ಭಾವವಿರುತ್ತದೆ. ಇದನ್ನು ಲೋಕಾನ್ವಯ ಮಾಡಿದಾಗ ಇನ್ನೊಬ್ಬರಿಗೂ ಕೊಟ್ಟು ತಾನೂ ತಿನ್ನವುದಾಗುತ್ತದೆ. ನಿಷ್ಕಾಮನೆಯಿಂದ ನಡೆಯಬೇಕಾದ ಪರಿ ಇದು. ದಾಸೋಹದ ದನಿ ಇದು.

'ಶಿವ' ಎಂಬ ಶಬ್ದದೊಡನೆ ಮಿಳನವಾಗುವವು, ಸತ್ಯ ಮತ್ತು ಸೌಂದರ್ಯವೆ-ಸತ್ಯಂ ಶಿವಂ ಸುಂದರಂ-ಅರ್ಥಾತ್ ಮಂಗಳವಾದುದರಲ್ಲಿ ಸತ್ಯವಿರುತ್ತದೆ, ಸೌಂದರ್ಯವಿರುತ್ತದೆ. ಶಿವ ಎಲ್ಲ ಜೀವದೊಡನಾಡಿ ಎಂದೇ ಶರಣರ ಮಾತು ಬಂತು: ಸಕಲ ಜೀವಾತ್ಮರಿಗೆ ಲೇಸ ಬಯಸುವವರು ಕುಲಜರು- ಕೂಡಲಸಂಗನ ಶರಣರು. ತಮ್ಮದಷ್ಟೇ ಅಲ್ಲ ಬದುಕು, ಜಗತ್ತಿನ ಜೀವಿಗಳಲ್ಲೂ ಬದುಕು ಇದೆ. ಆ ಬದುಕಿನೊಡನೆ ಸಂವೇದನೆಗೊಳ್ಳುವುದು ಪರಸ್ಪರ. ಕೊಳು-ಕೊಡೆ; ಪಡೆವುದರ ಬಗೆ ಇಲ್ಲಿರುತ್ತದೆ; ಶಿವನಿಗೆ ಕೊಟ್ಟದ್ದು ಪ್ರಸಾದವಾಗಿ ಪಡೆಯುವುದು, ಹಂಚಿ ಉಣ್ಣುವುದು ಇರುತ್ತದೆ. ಇದರಲ್ಲಿ ನಗೆ ಇದೆ, ನಲಿವಿದೆ, ಚೆಲುವಿದೆ. ಅಂತೇ ಮಾನಸಕ್ಕೆ ಮುದದ ಸಾವಯವ ಮೇಳ ಒದಗುತ್ತದೆ. ಇದರಲ್ಲಿ ದುಂದು ಚಲ್ಲುವರಿ ಇಲ್ಲ. ಬಿಟ್ಟ ಹೂ, ಗಿಡದ ಮೇಲಿರಲಿ, ಎಲೆಯ ಮರೆಯೊಳಗಿರಲಿ, ಒಳಗಿರಲಿ ವಿರೂಪಾಕ್ಷ ಲಿಂಗಯ್ಯನಿಗೆ ಹರಿಹರ ಮೀಸಲಿರಿಸಿ ಕಾವ್ಯ ಪ್ರಸಾದವಿಟ್ಟ. ಆ ಚೆಲುವಿನ ಸಿರಿ, ಇಳೆಯ ಗೌರಿಯರಿಗೂ ವಿರೂಪಾಕ್ಷ ಪ್ರಸಾದವಾಗಿ ಮುಡಿಗೊದಗಲಿ ಎಂಬ ಕಾಳಜಿ ಅಲ್ಲಿ ಇದ್ದೀತು. ಹೀಗೆಯೇ ಉಣಿಸಿರಲಿ, ಉಡುಗೆ ಇರಲಿ, ದಾಸಿಮಯ್ಯ ಇತ್ತ ತವನಿಧಿಯ ತೊಡುಗೆ ಇರಲಿ ಹಸಾದವಾಗಿ ಬಂದರೆ ಅದಕ್ಕೊಂದು ದೇವಮೌಲ್ಯ. ಅಂದರೆ ನಮ್ಮ ಬದುಕಿಗೆ ಅಗತ್ಯವಿದ್ದಷ್ಟು ಬಳಕೆಯ ಬನಿ ಇರಲಿ ಎಂಬ ಭಾವ ಇಲ್ಲಿನದು. ಆಯ್ದಕ್ಕಿ ಲಕ್ಕಮ್ಮನ ಮಾತಿನ ಮರ್ಮವಿದು. ಅಲ್ಲವು: ಇಷ್ಟಲಿಂಗಕ್ಕೆ ತೋರಿ ಮೃಷ್ಟಾನ್ನವ ಹೊಡೆದರೆ ನಿಮಗೆಲ್ಲಿಯದೋ ಇಷ್ಟಾರ್ಥಸಿದ್ಧಿ ? ಎನ್ನುವಲ್ಲಿ 'ಪ್ರಸಾದ' ಕಲ್ಪನೆಯಿಂದ ವಿರಹಿತರಾಗಬೇಡಿ, ದಾಸೋಹಕ್ಕೆ ಅಣಿಯಾಗಿ ಎಂಬ ಧ್ವನಿ ಉಕ್ಕುತ್ತದೆ. ಹೀಗೆ ಭಾವಗಳು ಸಂದಾಯವಾಗುವುದರಲ್ಲಿ ಹಬ್ಬವಿರುತ್ತದೆ; 'ಪರ' ಇರುತ್ತದೆ; ಸಾರ್ಥಕತೆ ಇರುತ್ತದೆ. ಇವೆಲ್ಲ ಪ್ರಾಚೀನ ಪಳೆಯುಳಿಕೆಗಳಲ್ಲ, ಪರಂಪರೆಯ ಸಾಂಸ್ಕೃತಿಕ ಚೆಲುವಿನ ಭಾವ, ಭವಿಷ್ಯತ್ತಿಗೆ ಹರಿಯುವ ಜಲಗಂಧ !

ಬದಲು, ಸುನಾಮಿಯ ಹಾವಳಿಯಲ್ಲಿ, ಅತಿವೃಷ್ಟಿಯ ಭಯಂಕರ ಪ್ರವಾಹದ ಭೀಕರತೆಯಲ್ಲಿ ನರಳಿದ, ನಲುಗಿದ, ನಿರಾಶ್ರಿತ ಜೀವಿಗಳನ್ನು ತಾತ್ಕಾಲಿಕ ಶೆಡ್‌ಗಳಿಂದಲೂ ಹೊರದೂಡುವ, ನಿರ್ಲಕ್ಷಿಸುವ ಪ್ರಯತ್ನಗಳು ಕಾಣಬರುವಲ್ಲಿ ಮನಸ್ಸಿಗೆ ಯಾವ ಮುದ ಬಂದೀತು? ನಿಷ್ಕರುಣೆಯ ಮಾನಸಿಗಳಿಗೆ ಮಾತ್ರ ಅದೊಂದು ರಕ್ಕಸ ಮೋಜು. ಇದರಿಂದ ನೊಂದ ಜೀವಿಗಳಿಗೆ, ಸಾಂತ್ವನ ಮಂಗಳ ತರುವುದಿಲ್ಲ, ಸತ್ಯದ ಪರಿಚಯವಾಗುವುದಿಲ್ಲ. ಶಿವನಿಗೆ ಬಗೆದ ದ್ರೋಹವಾಗದಿರುವುದಿಲ್ಲ. ಸೌಂದರ್ಯಕ್ಕೆ ಎಳೆದ ಕುರೂಪದ ಬರೆಯಾಗದಿರುವುದಿಲ್ಲ. ಅಲ್ಲದೆ ಮೇಲಿನ ಮನೋಭಾವದಿಂದಾಗಿ ಸಾಂಕ್ರಾಮಿಕ ರೋಗಗಳ ಹಬ್ಬುಗೆಗೆ, ಮುಕ್ತ ಅಂಗಳವಾಗುತ್ತಿದೆ. ಇದಕ್ಕೆ ಸಮಾಜ, ಸರ್ಕಾರ ತೀವ್ರವಾಗಿ ವೇದಿಕೆ ಮಾತಿನಿಂದಿಳಿದು ಪರಿಹಾರ ಕಾಯಕದಲ್ಲಿ ನಿರತವಾಗಬೇಕು.

*ಮನದ ಮುದಕ್ಕೆ ಸಾಲು ಮೇಳ*
*ಏನೆಲ್ಲ ಹೆಸರು ಹಬ್ಬ, ಪರ್ವ, ಓಕುಳಿ*
*ಮೆದುಳ ಕುಟಿಲ ಭಾವಕ್ಕೆ ಬುದ್ಧಿಯ ಜಾಲ*
*ಏನೆಲ್ಲ ಬಸಿರು, ಸ್ವಾರ್ಥ, ಕಪಟ, ಅತ್ಯಾಸೆ, ವಂಚನೆಯ ಸಾಲು.*
*ಜಗದ ಜೀವಿಯ ನೊಂದ ನೋವಿಗೆ*
*ಲೊಚಗುಟ್ಟುವ ವೇದಿಕೆಯ ಹಲ್ಲಿ ಶಕುನ*
*ಸಲ್ಲದಯ್ಯ, ಅಚಲದೇವನಾಗೊಡೆಯ*
*ಸಂವೇದನೆಯೊಳಗೆ ನೆರವಾಗುವುದು ಪ್ರಜ್ಞೆಯ ಬಾಳು ಕಾಣಯ್ಯ,*
*ಮಾನಸಕ್ಕೆ ಬೆಡಗು ತರುವ ಸಂಸ್ಕೃತಿಯ ಚೆಲ್ಲುವರಿ ಕಾಣಯ್ಯ !*

*-ಎಂ.ಜಿ. ನಾಗರಾಜ್*
*ಎಚ್.ಎಸ್. ಸಿದ್ಧಗಂಗಪ್ಪ*





# 'ಮಜಾ ಮಾಡು'



ಕೆಲವು ದಿನಗಳ ಹಿಂದೆ ವೈದ್ಯರ ಒಂದು ಸಂಘದವರು ಏರ್ಪಡಿಸಿದ್ದ ಕಾರ್ಯಕ್ರಮವೊಂದಕ್ಕೆ ನನ್ನನ್ನು ಕರೆದಿದ್ದರು. ಅದು 'ವೈದ್ಯರ ದಿನಾಚರಣೆ'ಯ ಕಾರ್ಯಕ್ರಮ. ನಡೆದದ್ದು ಬೆಂಗಳೂರು ನಗರದ ಹೊರವಲಯದಲ್ಲಿರುವ ಒಂದು 'ಕಂಟ್ರಿ ಕ್ಲಬ್' ವಿಹಾರ ಸ್ಥಳದಲ್ಲಿ. ಅಂದು ಭಾರಿ ಮಳೆ. ಹಾಗಾಗಿ ಕಾರ್ಯಕ್ರಮ ನಿಗದಿತ ಸಮಯಕ್ಕೆ ಆರಂಭವಾಗಲಿಲ್ಲ. ಬರಬೇಕಾಗಿದ್ದವರು ಇನ್ನೂ ಕೆಲವರು ಬಂದಿರಲಿಲ್ಲ.

ಯಾವುದೇ ಸಮಾರಂಭಗಳು ಹೀಗೆ ತಡವಾದರೆ ಅದುವರೆಗೆ ಬಂದವರಿಗೆ ಬೇಸರವಾಗಬಾರದೆಂದು ವ್ಯವಸ್ಥಾಪಕರು ಯಾವುದಾದರೂ ಹಾಡುಗಳ ಧ್ವನಿಸುರುಳಿ ಹಾಕುವಂತೆ ಧ್ವನಿವರ್ಧಕದವನಿಗೆ ಹೇಳುವುದು ರೂಢಿ. ಯಾವ ಸಂದರ್ಭಕ್ಕೆ ಯಾವ ಹಾಡು ಸೂಕ್ತ ಎಂಬುದನ್ನು ಆ ಧ್ವನಿವರ್ಧಕದವನು ವಿಚಾರ ಮಾಡಬೇಕೆಂದೇನೂ ಇರುವುದಿಲ್ಲ. ಅವನ ಅಭಿರುಚಿಯ ಕೆಲವು ಧ್ವನಿಸುರುಳಿಗಳನ್ನು ಇಟ್ಟುಕೊಂಡಿರುತ್ತಾನೆ. ಅವನ್ನೇ ಹಾಕಿ ಆನಂದ ಅನುಭವಿಸುತ್ತಾನೆ. ಅವನಿಗೆ ತುಂಬ ಪ್ರಿಯವಾದ ಹಾಡಿದ್ದರೆ ಅದರ ತಾಳಕ್ಕೆ ತನ್ನ ಮೈ ಕೈಯನ್ನೂ ಆಡಿಸುತ್ತಾನೆ.

ಆ ಹೊತ್ತು ಹಾಗೆಯೇ ಅಲ್ಲಿನ ಧ್ವನಿವರ್ಧಕದವನು ಅಂತಹ ಒಂದಷ್ಟು ಧ್ವನಿಸುರುಳಿಗಳನ್ನು ಹಾಕಿದ್ದ. ಅವೆಲ್ಲ ಬಹುತೇಕ ಸಿನಿಮಾ ಹಾಡುಗಳು. ಆ ಹಾಡುಗಳು ಯಾವುವೆಂಬುದು ನನಗೆ ನೆನಪಾಗುತ್ತಿಲ್ಲ. ಆದರೆ ಒಂದು ಹಾಡಿನ ಬಗೆಗೆ, ತಡವಾಗಿ ಆರಂಭವಾದ ಸಮಾರಂಭದಲ್ಲೇ, ನಾನು ಪ್ರಸ್ತಾಪಿಸಿದ ನೆನಪು. ಆ ಹಾಡಿನ ಪೂರ್ಣ ಪಾಠವು ನನಗೆ ನೆನಪಿರಲು ಸಾಧ್ಯವಿಲ್ಲ. 'ಮಜಾ ಮಾಡು', 'ಮಜಾ ಮಾಡು' ಎಂಬ ಸಾಲುಗಳು ಆ ಹಾಡಿನ ಆರಂಭದಲ್ಲೇ ಇದ್ದುದು ನೆನಪು.

ಪ್ರಾಸಂಗಿಕವಾಗಿ ನಾನು ಮಾತನಾಡುತ್ತ 'ಇಂತಹ ವೈದ್ಯರ ದಿನಾಚರಣೆಯನ್ನು ರೋಗಿಗಳಿರುವ ಆಸ್ಪತ್ರೆಗಳಲ್ಲೋ, ರೋಗಗಳ ಬಗೆಗೆ ತಿಳಿವಳಿಕೆ ಇಲ್ಲದ ಹಳ್ಳಿಗಳಲ್ಲೋ ನಡೆಸಬೇಕು. ಅದನ್ನು ಬಿಟ್ಟು ಕೇವಲ ವೈದ್ಯರೇ ಇರುವ ಮತ್ತು ಜನಗಳಿಂದ ದೂರ ಇರುವ ಇಂತಹ ವಿಹಾರ ಸ್ಥಳಗಳಲ್ಲಿ ನಡೆಸಿದರೆ ಆ ಹಾಡಿನಂತೆ ಕೇವಲ ಮಜಾ ಮಾಡಿದಂತಾಗುತ್ತದೆ' ಎಂದು ಹೇಳಿದೆ. ಅದನ್ನು ಅಲ್ಲಿಗೆ ಬಂದಿದ್ದ ವೈದ್ಯ ಶ್ರೋತೃಗಳು ಒಂದು ಹಾಸ್ಯವೆಂಬಂತೆ ಅನುಭವಿಸಿದರೂ ಅಷ್ಟೇ ಗಂಭೀರವಾಗಿಯೂ ಚಿಂತಿಸಿದರು. ಸಂಚಾಲಕರು ತಮ್ಮ ಮಾತಿನಲ್ಲಿ ಇನ್ನು ಮುಂದೆ ಗ್ರಾಮೀಣರಿರುವಲ್ಲಿಯೇ 'ವೈದ್ಯ ದಿನಾಚರಣೆ' ನಡೆಸುವುದಾಗಿ ಪ್ರಕಟಿಸಿದರು.

ನಾನು ಆ ಪ್ರಸಂಗವನ್ನು ಇಲ್ಲಿ ಪ್ರಸ್ತಾಪಿಸಿರುವುದರ ಹಿಂದೆ ಒಂದು ಮೂಕ ವ್ಯಥೆಯಿದೆ. ನಾವು ಕಳೆದ ತಿಂಗಳಷ್ಟೆ ಐವತ್ತೊಂಬತ್ತನೆಯ ಸ್ವಾತಂತ್ರ್ಯ ದಿನವನ್ನು ಆಚರಿಸಿದ್ದೇವೆ. ಆ ಆಚರಣೆ ಈಗ ಒಂದು ಪದ್ಧತಿಯ ಶಾಸ್ತ್ರವಾಗಿದೆ. ವಾಸ್ತವವಾಗಿ ಪ್ರತಿಯೊಂದು ದಿನಾಚರಣೆಗಳೂ ನಮ್ಮ ಆತ್ಮನಿರೀಕ್ಷೆಗೆ ಮೀಸಲಾಗಬೇಕು, ಆತ್ಮಸಾಕ್ಷಿಗೆ ಮೀಸಲಾಗಬೇಕು.

ನಾವೀಗ ಸ್ವತಂತ್ರರೇನೋ ನಿಜ. ಆದರೆ ಕಳೆದ ಐದು ದಶಕಗಳಲ್ಲಿ ಆಗಿರುವುದೇನು? ಅಧಿಕಾರಸ್ಥರು ನಾನು ಮೇಲೆ ಪ್ರಸ್ತಾಪಿಸಿದ 'ಮಜಾ' ಮಾಡಿದರು; ಈಗಲೂ ಮಾಡುತ್ತಿದ್ದಾರೆ. ನಾನು ಆಗಾಗ ಲಿಂ. ಸಿಂಪಿ ಲಿಂಗಣ್ಣನವರ ಒಂದು ಕಿರು ಕವನವನ್ನು ಉಲ್ಲೇಖಿಸುತ್ತಿರುತ್ತೇನೆ: "ಸ್ವಾತಂತ್ರ್ಯವಾರಿಗೋ ಸಿಕ್ಕಿದೆಯಂತೆ, ಸಿಕ್ಕಿದವರಿಗಷ್ಟೆ ದಕ್ಕಿದೆಯಂತೆ, ಅಡಿಗೆಯ ಮನೆಯಲಿ ಬೆಕ್ಕಿದೆಯಂತೆ, ಕೆನೆಯನ್ನೆಲ್ಲಾ ನೆಕ್ಕಿದೆಯಂತೆ," ಬಹುಶಃ ನಮಗೆ ಸಿಕ್ಕಿರುವ ಸ್ವಾತಂತ್ರ್ಯಕ್ಕೆ ಇದಕ್ಕಿಂತ ಮಿಗಿಲಾದ ಅರ್ಥವ್ಯಾಖ್ಯಾನ ಬೇರೆ ಬೇಕಿಲ್ಲವೆಂದು ನಾನು ಭಾವಿಸುತ್ತೇನೆ. ನಮ್ಮ ಅಧಿಕಾರಸ್ಥರಿಗೆ ಈಗ ಬೇಕಾಗಿರುವ ಒಂದೇ ಒಂದು ಸಂಪತ್ತೆಂದರೆ 'ಮಜಾ'. ಜನಸಾಮಾನ್ಯರ ಸ್ಥಿತಿಗತಿಗಳು ಅವರ ಕಣ್ಣಿಗೆ ಕಾಣುವುದೇ ಇಲ್ಲ.

ಈ ಸಂದರ್ಭದಲ್ಲಿ ಅಮೇರಿಕಾದ ಮೂರನೆಯ ಅಧ್ಯಕ್ಷರಾಗಿದ್ದ ಥಾಮಸ್ ಜಫರ್‌ಸನ್ ಅವರ ಪ್ರಸಂಗವೊಂದನ್ನು ಪ್ರಸ್ತಾಪಿಸುವುದು ಉಚಿತವೆಂದು ಕಾಣುತ್ತದೆ.

ಜಫರ್‌ಸನ್ ಅವರಿಗೆ ರೈತರು ಮತ್ತು ಕಾರ್ಮಿಕರೆಂದರೆ ಅಪಾರ ಅಭಿಮಾನ. ಏಕೆಂದರೆ ಅವರೆಲ್ಲ ಶ್ರಮಜೀವಿಗಳು. ಅಧ್ಯಕ್ಷರು ಯಾವಾಗಲೂ ರೈತರು ಮತ್ತು ಕಾರ್ಮಿಕರನ್ನು ಬೆಂಬಲಿಸುತ್ತಿದ್ದರು. ಅಮೇರಿಕಾದಲ್ಲಿ ಕೃಷಿ ಆಧಾರಿತ ಸಮಾಜ ನಿರ್ಮಾಣವಾಗಬೇಕೆಂಬುದು ಅವರ ಹಂಬಲವಾಗಿತ್ತು. ಅಷ್ಟು ದೊಡ್ಡ ರಾಷ್ಟ್ರದ ಅಧ್ಯಕ್ಷರಾಗಿದ್ದರೂ, ವೈಯಕ್ತಿಕವಾಗಿ ರೈತರಷ್ಟೇ ಸರಳವಾದ ನಡೆ-ನುಡಿ ಪಾಲಿಸುತ್ತಿದ್ದರು. ಅವರೆಂದೂ ತಾವು ಅಧ್ಯಕ್ಷರಂತೆ ಕಾಣಿಸಿಕೊಳ್ಳಬೇಕೆಂದು ಇಚ್ಚಿಸುತ್ತಿರಲಿಲ್ಲ.

ಒಮ್ಮೆ ಜಫರ್‌ಸನ್ ಅವರು ಒಂದು ಪ್ರತಿಷ್ಠಿತ ಪ್ರಸಿದ್ಧ ಹೊಟೇಲಿಗೆ ಹೋಗಿ ಅಂದು ತಂಗಲು ಒಂದು ಕೊಠಡಿ ಕೇಳಿದರು. ಆ ಹೊಟೇಲಿನವ ಜಫರ್‌ಸನ್ ಅವರ ಸರಳ ವೇಷ ಕಂಡು, ಈತನಾರೋ ರೈತನಿರಬೇಕೆಂದು ಭಾವಿಸಿ 'ರೂಮಿಲ್ಲ' ಎಂದು ಹೇಳಿದ. ಅದಕ್ಕೆ ಜಫರ್‌ಸನ್ ಮರುಮಾತಾಡದೆ ಅಲ್ಲಿಂದ ಹೋದರು.

ಅಷ್ಟರಲ್ಲಿ ಅಲ್ಲಿದ್ದ ಯಾರೋ ಒಬ್ಬ 'ಈಗ ಬಂದಿದ್ದವರು ನಮ್ಮ ರಾಷ್ಟ್ರದ ಅಧ್ಯಕ್ಷರು' ಎಂದು ಹೇಳಿದಾಗ ಹೊಟೇಲು ಮಾಲಿಕ ಬೆಚ್ಚಿಬೆವರಿದ. ತನ್ನ ವ್ಯವಸ್ಥಾಪಕನನ್ನು ಅವರಿದ್ದಲ್ಲಿಗೆ ಓಡಿಸಿ, ಅವರ ಕ್ಷಮೆ ಕೇಳಿ ಕರೆದುಕೊಂಡು ಬರುವಂತೆ ತಿಳಿಸಿದ. ಆ ವ್ಯವಸ್ಥಾಪಕ ಜಫರ್‌ಸನ್ ಅವರ ಬಳಿಗೆ ಓಡಿ ಬಂದು ಮಾಲಿಕ ಹೇಳಿದಂತೆ ಕ್ಷಮೆ ಕೋರಿ ದಯವಿಟ್ಟು ಹೊಟೇಲಿಗೆ ಬರಬೇಕೆಂದೂ, ಅವರಿಗಾಗಿ ಎಲ್ಲ ಸೌಲಭ್ಯಗಳಿರುವ ವಿಶೇಷ ಕೊಠಡಿಯನ್ನು ಕೊಡುವುದಾಗಿಯೂ ಹೇಳಿದ.

ಆಗ ಥಾಮಸ್ ಜಫರ್‌ಸನ್ : "ನಿನ್ನ ಮಾಲಿಕನಿಗೆ ಹೇಳು. ಅಮೇರಿಕಾದ ರೈತನಿಗೆ ರೂಮಿಲ್ಲದ ಆತನ ಹೊಟೇಲಿನಲ್ಲಿ ಅಮೇರಿಕಾದ ಅಧ್ಯಕ್ಷನೂ ಉಳಿಯಲಾರ ಎಂದು ತಿಳಿಸು" ಎಂದು ಹೇಳಿ ಹತ್ತಿರದಲ್ಲೇ ಇದ್ದ ಒಂದು ಸಾಧಾರಣ ಹೊಟೇಲಿನಲ್ಲಿ ಉಳಿದರಂತೆ!

ಈ ಪ್ರಸಂಗ ಕೇವಲ 'ಮಜಾ' ಮಾಡುತ್ತಿರುವ ನಮ್ಮ ಸ್ವತಂತ್ರ ಭಾರತದ ಅಧಿಕಾರಸ್ಥರಿಗೆ ನಾಚಿಕೆ ಬರಿಸಬೇಕು! ಪ್ರಜಾಪ್ರಭುತ್ವದ ಅಧಿಕಾರದ ಅರ್ಥಕ್ಕೆ ಇದೊಂದು ಪ್ರಸಂಗ ಸಾಕು!

-ಗೊ.ರು. ಚನ್ನಬಸಪ್ಪ

# ಲಿಂ. ಶಾಂತಾದೇವಿ ಮಾಳವಾಡ ಅವರಿಗೆ ಶ್ರದ್ಧಾಂಜಲಿ



೧೦.೧೨.೧೯೨೨ರಲ್ಲಿ ಬೆಳಗಾವಿಯಲ್ಲಿ ಜನಿಸಿದ ಶಾಂತಕ್ಕ ದುರ್ದೈವದಿಂದ ತಮ್ಮ ಬಾಲ್ಯದಲ್ಲಿಯೇ ತಮ್ಮ ತಂದೆ–ತಾಯಿಯನ್ನು ಕಳೆದುಕೊಂಡರು. ಅಜ್ಜಿಯ ಆಸರೆಯಲ್ಲಿ ಬೆಳೆದ ಅವರು ಕಲಿಯತೊಡಗಿದ್ದರಾದರೂ ಎರಡನೆಯ ತರಗತಿಗೆ ಬಂದಾಗ ಸಂಪ್ರದಾಯಸ್ಥ ಮನೆಯ ವಾತಾವರಣದಿಂದ ವಿದ್ಯಾಭ್ಯಾಸ ಮುಂದುವರೆಯಲಿಲ್ಲ. ೧೯೩೭ರಲ್ಲಿ ಪ್ರೊ. ಸ.ಸ. ಮಾಳವಾಡರ ಧರ್ಮಪತ್ನಿಯಾಗಿ ಧಾರವಾಡಕ್ಕೆ ಬಂದ ಮೇಲೆ ಶಾಂತಕ್ಕ ಅವರ ಬಾಳಿನಲ್ಲಿ ಅರಿವಿನ ಹೊಸ ಬೆಳಗು ಮೂಡಿತು. ಔಪಚಾರಿಕ ವಿದ್ಯೆಯಿಂದ ವಂಚಿತರಾದರೂ, ಧೃತಿಗೆಡದೆ ಸ್ವಂತ ಸಾಮರ್ಥ್ಯದಿಂದ ಸಾಹಿತ್ಯಾಭಿರುಚಿ, ವ್ಯಾಸಂಗ ಬೆಳೆಸಿಕೊಂಡರು. ಪ್ರೊ. ಮಾಳವಾಡರ ಸಹಕಾರ ಮಾರ್ಗದರ್ಶನದಿಂದ ಕತೆಗಾರ್ತಿ, ಕಾದಂಬರಿಗಾರ್ತಿ, ವೈಚಾರಿಕ ಲೇಖಕಿಯಾಗುವಷ್ಟು ಬೆಳೆದು ಉತ್ತಮ ಕೃತಿಗಳನ್ನು ರಚನೆ ಮಾಡಿ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನ ಪಡೆದರು. ೧೯೪೧ರಲ್ಲಿ 'ಮೊಗ್ಗೆಯ ಮಾಲೆ' ಕಥಾ ಸಂಕಲನ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಕಾಲಿರಿಸಿದ ಶಾಂತಕ್ಕ ಬೆಳವಡಿ ಮಲ್ಲಮ್ಮ, ಬಸವಯುಗದ ಶಿವಶರಣೆಯರು, ದಾನ ದಾಸೋಹಿ ದಾನಮ್ಮ, ಮಹಿಳಾ ಚೇತನ, ಸಾಮಾಜಿಕ ರಂಗದಲ್ಲಿ ಮಹಿಳೆ, ಶ್ರೀಗಿರಿಯಿಂದ ಹಿಮಗಿರಿಗೆ, ಶೂರರಾಣಿ ಕೆಳದಿ ಚೆನ್ನಮ್ಮಾಜಿ (ಬೃಹತ್ ಕಾದಂಬರಿ) – ಹೀಗೆ ಸುಮಾರು ೪೦ ಕೃತಿಗಳನ್ನು ರಚಿಸಿದ್ದಾರೆ. ಅವರ ಸಾಹಿತ್ಯ ಬಹು ಹುಲುಸಾಗಿರುವುದರ ಜೊತೆಗೆ ವೈವಿಧ್ಯಪೂರ್ಣವಾಗಿದೆ. ರುಚಿ ರುಚಿಯಾದ ಅಡುಗೆಯಿಂದ ಹಿಡಿದು ಆರೋಗ್ಯ, ಗೃಹಾಲಂಕರಣ, ಲಲಿತಕಲೆ, ಮಹಿಳೆಯರ ಸೌಂದರ್ಯ ಪೋಷಣೆ ಮುಂತಾದ ಅಗತ್ಯ ವಿಷಯಗಳ ಮಾಹಿತಿಯೊಂದಿಗೆ ಸಂಶೋಧನೆ, ಸಣ್ಣ ಕತೆ, ಕಾದಂಬರಿ, ಜೀವನಚರಿತ್ರೆ, ನಾಟಕ, ಪ್ರವಾಸ, ಅನುವಾದ, ಆಧ್ಯಾತ್ಮ ಚಿಂತನೆ, ಮಕ್ಕಳ ಸಾಹಿತ್ಯದವರೆಗಿನ ಎಲ್ಲ ಪ್ರಕಾರಗಳಲ್ಲಿ ತಮ್ಮ ಲೇಖನಿಯನ್ನು ದುಡಿಸಿದ್ದಾರೆ.

ಶಾಂತಾದೇವಿ ಅವರ ಸಾಮಾಜಿಕ ಚಟುವಟಿಕೆಗಳು ಹಲವು ವಿಧ. ಮಹಿಳಾ ಪ್ರಪಂಚ ಕುರಿತು ಕಳಕಳಿ, ಸಮಾಜ ಸಂಸ್ಕೃತಿಗಳಲ್ಲಿ ಮಹಿಳೆಯರ ಸ್ಥಾನಮಾನ ಮುಂತಾದ ಹಲವಾರು ವಿಷಯಗಳ ಬಗೆಗೆ ಚಿಂತನೆ ಮಾಡಿ ತಮ್ಮ ವ್ಯಕ್ತಿತ್ವವನ್ನು ವಿಶಾಲವಾಗಿಸಿಕೊಂಡದ್ದಲ್ಲದೇ ಸ್ತ್ರೀ ಜಾಗೃತಿಯ ಚಟುವಟಿಕೆಗಳನ್ನು ಕೈಗೆತ್ತಿಕೊಂಡರು. ಅನೇಕ ಸಂಘ–ಸಂಸ್ಥೆ, ಪರಿಷತ್ತು, ಸಮ್ಮೇಳನಗಳಲ್ಲಿ ಭಾಗವಹಿಸಿ, ಸದಸ್ಯೆ, ಕಾರ್ಯದರ್ಶಿನಿ, ಉಪಾಧ್ಯಕ್ಷೆ, ಅಧ್ಯಕ್ಷೆಯ ಸ್ಥಾನವನ್ನಲಂಕರಿಸಿ ಮಹಿಳಾ ಪ್ರಪಂಚಕ್ಕೆ ಒಂದು ವಿಶೇಷ ಕಳೆ ತಂದುಕೊಟ್ಟರು. ಸಾಮಾಜಿಕ ಅಭಿವೃದ್ಧಿ, ಸಾಮಾಜಿಕ ಶಿಕ್ಷಣ, ರಾಷ್ಟ್ರೀಯ ಉಳಿತಾಯ, ಮಕ್ಕಳ ನ್ಯಾಯಾಲಯ, ಮಕ್ಕಳ ಕಲ್ಯಾಣ, ಮಹಿಳಾ ಪರಿಷತ್ತು, ಹೀಗೆ ಅವರು ಆಸ್ಥೆ ವಹಿಸದೇ ಇರುವ ಸಾಮಾಜಿಕ ಕ್ಷೇತ್ರ ವಿರಳವೆಂದೇ ಹೇಳಬಹುದು. ಅವರು ಕಟ್ಟಿ ಬೆಳೆಸಿದ ಅಕ್ಕನ ಬಳಗಗಳು, ಮಹಿಳಾ ಮಂಡಳಿಗಳ ಸ್ತ್ರೀಯರ ಜಾಗೃತಿ ಕೇಂದ್ರಗಳಾಗಿವೆ.

ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವ, ಕರ್ನಾಟಕ ರಾಜ್ಯ ಸರ್ಕಾರದ ಅತ್ತಿಮಬ್ಬೆ ಪ್ರಶಸ್ತಿ, ಸ್ವರಲಿಪಿ ಪ್ರತಿಷ್ಠಾನದ 'ಚಂದ್ರಕಲಾ ಪ್ರಶಸ್ತಿ', 'ಲಿಪಿ–ಪ್ರಾಜ್ಞೆ' ಬಿರುದು ಇವೇ ಮೊದಲಾಗಿ ಶಾಂತಕ್ಕ ಅವರಿಗೆ ಹಲವು ಗೌರವ ಪ್ರಶಸ್ತಿಗಳು ಸಂದಿವೆ. ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಶಾಂತಕ್ಕ ಅವರ ೭೦ನೆಯ ಹುಟ್ಟುಹಬ್ಬದ ಸಮಾರಂಭದಲ್ಲಿ ಅಭಿನಂದನ ಗ್ರಂಥ 'ಪ್ರಶಾಂತ' ಪ್ರಕಟವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು ಗೌರವ ಸದಸ್ಯತ್ವ ನೀಡಿದಾಗ 'ಶಾಂತಕಿರಣ' ವಾಚಿಕೆ ತಂದಿದೆ. ಪರಿಷತ್ತಿನಲ್ಲಿ 'ಶಾಂತಾದೇವಿ ಮಾಳವಾಡ' ದತ್ತಿ ನಿಧಿ ಸ್ಥಾಪಿತವಾಗಿದೆ. ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ೫ನೆಯ ಶರಣ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿದ್ದ ಶಾಂತಕ್ಕ ಅವರನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ತನ್ನ ಗೌರವ ಸದಸ್ಯತ್ವವನ್ನು ನೀಡಿ ಗೌರವಿಸಿತ್ತು.

ಬದುಕು ಬರಹಗಳ ಅನನ್ಯತೆಯಿಂದ ಆದರ್ಶವಾಗಿದ್ದ ಮತ್ತು ಶರಣ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದ ಲಿಂ. ಶಾಂತಾದೇವಿ ಮಾಳವಾಡ ಅವರಿಗೆ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ತನ್ನ ಶ್ರದ್ಧಾಂಜಲಿ ಅರ್ಪಿಸುತ್ತದೆ.

**ಭಗವಾನ್ ಬಸವೇಶ್ವರ**

ಭಗವಾನ್ ಬಸವೇಶ್ವರ ಮಾಡಿರುವಾ
ತತ್ತ್ವದ ಒಳದಿರುವನು ತೋರಿಸುವಾ
ಜ್ಞಾನದಿ ಮೋಕ್ಷವು ಎಂದೆನಿಸಿರುವಾ
ಅದರಿಂತಾಚರಿಪುದೆ ನಿಜದಿರುವಾ

–ನಾ.ಮ. ಬಸವರಾಜಯ್ಯ





# ಅನುಭವ ಮಂಟಪ ಮತ್ತು ಜಾನಪದ ಸಂಬಂಧ

–ಡಾ. ವೀರಣ್ಣ ದಂಡೆ, ಗುಲಬರ್ಗ ವಿಶ್ವವಿದ್ಯಾಲಯ, ಗುಲಬರ್ಗ

'ಅನುಭವ ಮಂಟಪ' ಎನ್ನುವ ಹೆಸರಿನಲ್ಲಿಯೆ 'ಮಂಟಪ' ಎನ್ನುವುದು ಸಂಸ್ಥೆ, ಬಳಗ, ವೇದಿಕೆ–ಮುಂತಾದ ಅರ್ಥಗಳಿಗೆ ಸಮಾನವಾದ ಅರ್ಥ ಹೊಂದಿದಂತಿದೆ. ಇದರಿಂದ ಅದೊಂದು 'ಸಂಘಟನೆ'ಯನ್ನು ಸೂಚಿಸುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ. ಈ ಸಂಘಟನೆ ಯಾವ ತಾತ್ತ್ವಿಕ ಹಿನ್ನೆಲೆ, ಯಾವ ಉದ್ದೇಶಕ್ಕಾಗಿ ಎಂಬುದನ್ನು 'ಅನುಭವ' ಎನ್ನುವ ಪ್ರಥಮ ಪದ ವ್ಯಕ್ತಪಡಿಸುತ್ತದೆ. 'ಅನುಭವ' ಮತ್ತು 'ಮಂಟಪ' ಈ ಎರಡೂ ನಾಮಪದಗಳಾಗಿದ್ದು, ಒಂದು ಸಂಘಟನೆಯ ಹೆಸರಿನಲ್ಲಿ ಬಳಕೆಯಾಗಿರುವುದು ಗಮನಾರ್ಹ. ಎರಡು ನಾಮಪದಗಳು ಒಂದಾದ ನಂತರ ಒಂದರಂತೆ ಬಳಕೆಯಾದಲ್ಲಿ ಮೊದಲನೆಯ ನಾಮಪದವು ಎರಡನೆಯದರ 'ವಿಶೇಷಣ'ವಾಗಿ ಮಾರ್ಪಡುತ್ತದೆ. ಇಲ್ಲಿ 'ಅನುಭವ' ಎಂಬುದು 'ಮಂಟಪ'ದ ವಿಶೇಷಣವಾಗಿ ಪರಿವರ್ತನೆ ಹೊಂದಿ, 'ಮಂಟಪ' ಹೊಂದಿದ ಉದ್ದೇಶದ ಅರಿವು ಮಾಡಿಕೊಡುತ್ತದೆ. 'ಅನುಭವ' ಎಂದರೆ 'ಸ್ವಪ್ರಯತ್ನದಿಂದ ಪಡೆದ ತಿಳುವಳಿಕೆ' ಎಂದಾಗುತ್ತದೆ. ಶರಣರ 'ಅರಿವಿನ' ಹಿನ್ನೆಲೆಯಲ್ಲಿ 'ಅನುಭವ' ಎನ್ನುವಲ್ಲಿ—ಲೌಕಿಕ ಮತ್ತು ಪಾರಮಾರ್ಥಿಕ ಈ ಎರಡರ ತಿಳುವಳಿಕೆಯೂ ಸೇರುತ್ತದೆಂದು ಹೇಳಬಹುದಾಗಿದೆ.

ಈ 'ಅನುಭವ ಮಂಟಪ'ದ ಕಲ್ಪನೆ ಮತ್ತು ಸ್ಥಾಪನೆ ಬಸವಣ್ಣನವರದೇ ಎಂಬುದಕ್ಕೆ ನೀಲಾಂಬಿಕೆಯ ಒಂದು ವಚನ ನಮಗೆ ಸುಳುಹು ಕೊಡುತ್ತದೆ.

*......ಇಪ್ಪತ್ತೈದು ಸಾವಿರ ಚಾರ್ವಾಕರಂ ನೆಗ್ಗಲೊತ್ತಿ*
*ಅಪ್ರತಿಮ ಶಿವಗಣಂಗಳ ಮಹಾತ್ಮೆಯಂ ಮೆರೆದಾತ ನಮ್ಮ ಬಸವಯ್ಯನು*
*ಪ್ರಣವದ ಬೀಜವ ಬಿತ್ತಿ, ಪಂಚಾಕ್ಷರಿಯ ಬೆಳೆಯ ಬೆಳೆದು*
*ಪರಮ ಪ್ರಸಾದವನೊಂದು ರೂಪ ಮಾಡಿ ಮೆರೆದು*
*ಭಕ್ತಿಫಲವನುಂಡಾತ ನಮ್ಮ ಬಸವಯ್ಯನು*
*ಚನ್ನಬಸವನೆಂಬ ಪ್ರಸಾದಿಯ ಪಡೆದು ಅನುಭವ ಮಂಟಪವನನುಮಾಡಿ*
*ಅನುಭವಮೂರ್ತಿಯಾದ ನಮ್ಮ ಬಸವಯ್ಯನು*
*ಅರಿವ ಸಂಪಾದಿಸಿ ಆಚಾರವನಂಗಗೊಳಿಸಿ*
*ಏಳುನೂರೆಪ್ಪತ್ತು ಅಮರಗಣಂಗಳ*
*ಅನುಭವಮೂರ್ತಿಗಳ ಮಾಡಿದಾತ ನಮ್ಮ ಬಸವಯ್ಯನು*
*ಆ ಅನುಭವದಲ್ಲಿ ಐಕ್ಯ ಪ್ರಸಾದವನಂಗಂಗೊಂಡು*
*ಮಂತ್ರ ನಿರ್ಮಂತ್ರವಾದಾತ ನಮ್ಮ ಬಸವಯ್ಯನು*
*ಭಕ್ತಿಸ್ಥಲವನಳಿದು ಭಾವವಡಗಿ ಬಟ್ಟಬಯಲ ಕೂಡಿ*
*ಸಂಗಯ್ಯನಲ್ಲಿ ಸ್ವಯಂಲಿಂಗಿಯಾದ ನಮ್ಮ ಬಸವಯ್ಯನು*

*(ಶಿವಶರಣೆಯರ ವಚನಗಳು, ಪು. ೧೯೩)*

ನೀಲಮ್ಮನ ಈ ವಚನ ಭಾಗದಲ್ಲಿ 'ಅನುಭವ ಮಂಟಪ'ದ ಹುಟ್ಟು ಮತ್ತು ಕಾರ್ಯಸಾಧನೆಯನ್ನು ನಾವು ಕಾಣುತ್ತೇವೆ. 'ಅನುಭವ ಮಂಟಪ'ದ ಬೆಳವಣಿಗೆಯ ಜೊತೆಗೆ ಬಸವಣ್ಣ ಮೊದಲಾಗಿ ಎಲ್ಲ ಶರಣರ ವ್ಯಕ್ತಿತ್ವ ವಿಕಸನದ ಸುಳಿವು ಇಲ್ಲಿದೆ ಎನಿಸುತ್ತದೆ.

'ಅನುಭವ ಮಂಟಪ'ದಂತಹ ಒಂದು ಸಂಘಟನೆ ಬಸವಣ್ಣನವರಿಗೆ ಅನಿವಾರ್ಯವಾದುದು. ಚಾರ್ವಾಕರಂತಹ ನಾಸ್ತಿಕರ ಉಪಟಳವನ್ನು 'ನೆಗ್ಗಲೊತ್ತಲು' ಎಂಬ ಮಾತು ಗಮನಾರ್ಹ. ಇಲ್ಲಿಂದಲೇ ಈ ಸಂಸ್ಥೆಯೊಂದಿಗೆ ಜಾನಪದದ ನಂಟು ಹೊಸೆದುಕೊಳ್ಳಲು ಪ್ರಾರಂಭಿಸುತ್ತದೆ. ಬಸವಣ್ಣನವರು ತಾವು ಬದುಕಿನಲ್ಲಿ ನೆಚ್ಚಿಕೊಂಡದ್ದು, ಬದುಕಿಗೆ ಆಧಾರವೆಂದು ನಂಬಿಕೊಂಡದ್ದು ಚಾರ್ವಾಕರ ಆತಂಕ. ಈಗ ಬಸವಣ್ಣನವರಿಗೆ ಹೊಳೆದದ್ದು ಜಾರ್ವಾಕರಿಂದ ತೊಂದರೆಗೆ ಈಡಾದ ತನ್ನಂತಹ ಆಲೋಚನೆ ಜನಸಾಮಾನ್ಯರ ಸಂಘಟನೆ ಮತ್ತು ಹೋರಾಟ. ಮನುಷ್ಯನ ಕನಿಷ್ಟ ಪಕ್ಷ ಈ ಜಾನಪದ ಹಿನ್ನೆಲೆಯೇ ಅವನಿಗೆ ಬದುಕಲು ಕಲಿಸಿಕೊಡುವುದು ಮತ್ತು ಮಾನವ ಬದುಕಿಗೆ ವಿಕಸನವನ್ನೊದಗಿಸಿ ಕೊಡುವುದು ಸರಿ. ಈ ಬದುಕಿನ ಪ್ರಶ್ನೆ ಬರುತ್ತಲೇ ಬಸವಣ್ಣನವರು ಮಾಡಿದ್ದು 'ಅಪ್ರತಿಮ ಶಿವಗಣಂಗಳ' ಸಂಘಟನೆ. ಹೀಗೆ ತಾನು ತನ್ನಂತಹವರು ಬದುಕಲು ಅನಿವಾರ್ಯವಾಗಿ ರೂಪು ತಳೆದ ಒಂದು ಸಂಘಟನೆ ಆಮೇಲೆ 'ಅನುಭವ ಮಂಟಪ' ಎಂದು ಹೆಸರು ಪಡೆದಿರುವ ಸಾಧ್ಯತೆ ಇದೆ.

ಕಲ್ಯಾಣದಲ್ಲಿ ತನ್ನ ಪ್ರಾರಂಭದ ಜೀವನದಲ್ಲಿ–ಜನಸಾಮಾನ್ಯರ ಮನೆ–ಮನಗಳನ್ನು ಅರಿಯಲು ಬಸವಣ್ಣನವರಿಗೆ ಒದಗಿದ ಇದೊಂದು ಸಕಾಲಿಕ ಸುವರ್ಣಾವಕಾಶವೆಂದೇ ಹೇಳಬೇಕು. ಹಲ ಬಗೆ ಅಸಮಾನತೆಗಳನ್ನು ಮಾನಸಿಕವಾಗಿ ಒಪ್ಪದ ಬಸವಣ್ಣನವರಿಗೆ ಇಲ್ಲಿ ಪ್ರಾಯೋಗಿಕವಾಗಿ ಆಚರಿಸುವ ಅವಕಾಶ ದೊರೆಯಿತೆಂದು ತೋರುತ್ತದೆ. ಮೊದಲಿಗೆ ಅದೊಂದು 'ಆಸ್ತಿಕರ ಗುಂಪು' (ದೇವರಲ್ಲಿ ನಂಬಿಕೆವುಳ್ಳವರ ಗುಂಪು) ತಯಾರಾಯಿತೆಂದೇ ಇಟ್ಟುಕೊಳ್ಳಬಹುದು.

ಹುಟ್ಟಿನಿಂದ ಉಚ್ಚ ಜಾತಿಯನ್ನು ಹೊಂದಿ, ಕಲ್ಯಾಣದಲ್ಲಿ ರಾಜಾಶ್ರಯವನ್ನು ಪಡೆದ ಬಸವಣ್ಣನವರನ್ನು ಸಾಮಾನ್ಯ ಜನ ಆತ ತಮ್ಮತ್ತಲೇ ಇಳಿದು ಬರುವುದನ್ನು ಸಹಜವಾಗಿಯೇ ಬೆರಗುಗಣ್ಣಿನಿಂದ ಕಂಡಿರಬೇಕು. ಈ ಸಂದರ್ಭದಲ್ಲಿ ಬಸವಣ್ಣನವರಿಗೆ ಜನಸಾಮಾನ್ಯರ ಜೀವನವನ್ನು ಅರಿಯಲು ಸಾಧ್ಯವಾಗಿದೆ. ಇಲ್ಲಿ ಬಸವಣ್ಣನವರು ಜಾನಪದ ಕ್ಷೇತ್ರಕಾರ್ಯ ತಜ್ಞನ ರೂಪದಲ್ಲಿ–ಸಾಮಾನ್ಯರ ಬದುಕಿನ ವಿವರಗಳನ್ನು ಅರಿಯಲು ಪ್ರಯತ್ನಿಸುತ್ತಾರೆ. ಅಂತಲೇ ಅವರಿಗೆ ಒಂದೊಂದು ಗುಡಿಸಲಿನ ಕಥೆ–ವ್ಯಥೆ ಗೊತ್ತು. ಕುಂದು–ಕೊರತೆ ಗೊತ್ತು, ಅರಿವು–ಮೌಢ್ಯ ಗೊತ್ತು. ಆತನ ಬಹುತೇಕ ವಚನಗಳ ವಸ್ತುವೂ ಇದೇ ಆಗಿರಲು ದೊಡ್ಡ ಸಾಕ್ಷಿ. ಬಸವಣ್ಣನವರು ಸಾಮಾನ್ಯರೊಂದಿಗೆ ಅವರ ಸಂಘಟನೆಗಾಗಿ ಬೆರೆತಾಗಿನ ಮತ್ತು ಅನುಭವ ಮಂಟಪದಲ್ಲಿ ಚರ್ಚಿಸಿದ ಅನುಭವ.

ನಿರಂತರವಾಗಿ ಸಾಗಿದ ಈ ಸಂಪರ್ಕದಿಂದಲೇ ಬಸವಣ್ಣನವರಿಗೆ ಹಲವಾರು ಬಗೆಯ ಸಾಮಾಜಿಕ ಸ್ತರಗಳಲ್ಲಿ ಬದುಕುತ್ತಿರುವ ಜನ–ಅನುಯಾಯಿಗಳಾಗಿ ದೊರೆತರೆಂದು ತೋರುತ್ತದೆ. ಹೀಗೆ ಈ ನಿರಂತರ ಸಂಪರ್ಕ ಮತ್ತು ಅನುಯಾಯಿಗಳ ಬೆಂಬಲ ಎರಡೂ ಸ್ತರಗಳಲ್ಲಿ ಬಸವಣ್ಣನವರು ಸಾಮಾನ್ಯರೊಂದಿಗೆ ಚರ್ಚಿಸಿದ್ದು–ಬದುಕುವ ರೀತಿಯನ್ನು ಒಂದು ಮಹತ್ತರ ಸಂಘಟನೆ ಮಾಡಿದ ಬಹು ದೊಡ್ಡ ಕೆಲಸ–ಬದುಕುವ ರೀತಿಯನ್ನು ಜನರಿಗೆ ಕಲಿಸಿದ್ದು–ಇದು ಅಪ್ಪಟ ಜಾನಪದ ಪ್ರಜ್ಞೆಯ ದ್ಯೋತಕ. ಇದರಿಂದಾಗಿಯೇ 'ಕಾಯಕ ತತ್ವ' ಮತ್ತು 'ವೀರಶೈವ ತತ್ವಶಾಸ್ತ್ರ' ಪರಿಪೂರ್ಣ ರೂಪು ಪಡೆದಿರುವ ಸಾಧ್ಯತೆ ಇದೆ. 'ಹುಟ್ಟಿನಿಂದ ಮೇಲು ಕೀಳೆಂಬುದಿಲ್ಲ', 'ಕಾಶಿ ಕಮ್ಮಾರನಾದ ಬೀಸಿ ಮಡಿವಾಳನಾದ', 'ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದಾಗಿರಬೇಕು'–ಇಂತಹ ನೂರಾರು ಸಂಗತಿಗಳು ಅವರ ಚರ್ಚೆಯಲ್ಲಿ ಬಂದುಹೋದುದು–ಜಾನಪದ ಮನಸ್ಸಿನ ಬಹಿರಂಗ ಪ್ರದರ್ಶನವೇ ಆಗಿದೆ. ಮಾಡುವ ಕೆಲಸವೇ ಅತ್ಯಂತ ಶ್ರೇಷ್ಠವಾದುದು ಎಂದು ಹೇಳಿ–ಅವರವರ ಕಾರ್ಯದಿಂದಲೇ ಅವರನ್ನು ಗುರುತಿಸುವ ಹೊಸ ಆಲೋಚನೆ ಮಾಡಿದ್ದು–ಜಾನಪದ ಅರಿವಿನಿಂದಲೇ. ಇದರಿಂದ ಜಾತಿ ಮತ್ತು ಕಸಬುಗಳ ಬಗೆಗಿನ ಕೀಳರಿಮೆ ದೂರವಾಗಿಸಲು ಸಾಧ್ಯವಾಗಿದೆ. ಮೇದಾರಕೇತಯ್ಯ, ಡೋಹರ ಕಕಯ್ಯ, ಜೇಡರ ದಾಸಿಮಯ್ಯ, ಸಮಗಾರ ಹರಳಯ್ಯ, ಹಡಪದ ಅಪ್ಪಣ್ಣ, ತಳವಾರ ಕಾಮಿದೇವ, ಗಾಣದ ಕನ್ನಪ್ಪ, ವೈದ್ಯ ಸಂಗಣ್ಣ, ಕಿರಾತ ಸಂಗಯ್ಯ, ನುಲಿಯ ಚಂದಯ್ಯ, ಸೂಜಿಕಾಯಕದ ರಾಮಿತಂದೆ, ಬಾಚಿ ಕಾಯಕದ ಬಸವಪ್ಪ–ಮುಂತಾದ ಹೆಸರುಗಳನ್ನು ನೋಡಿದರೆ ನಮಗೆ ಬಸವಣ್ಣನವರು ಮಾಡಿದ ಅಗಾಧ ಸಂಘಟನೆ ಮತ್ತು ಅವರ ಉದ್ದೇಶದ ಹಿಂದಿನ ಜಾನಪದ ಪ್ರಜ್ಞೆ ಕಾಣಿಸಿಕೊಳ್ಳುತ್ತದೆ. ಹೀಗೆ ಅವರವರ ಜಾತಿ ಮತ್ತು ಕಸಬುಗಳ ಗುರುತಿನಿಂದಲೇ ಜನಪದರು ಆಯಾ ಜನರನ್ನು ಗುರುತಿಸುವ ಮತ್ತು ಮರ್ಯಾದೆಯಿಂದ ಕಾಣುವ ದೊಡ್ಡ ಗುಣಗಳನ್ನು ನೋಡುತ್ತೇವೆ. ಕುಂಬಾರಣ್ಣ, ಬಡಿಗ, ಅಗಸ, ಕಂಬಾರ, ಗಾಣಿಗ, ಮಾಲೆಗಾರ, ಲೆಂಕಮಗ ಇತ್ಯಾದಿಗಳನ್ನು ಗಮನಿಸಬಹುದು.

ಬಸವಣ್ಣನವರ ಜನಸಾಮಾನ್ಯರೊಂದಿಗಿನ ಸಂಪರ್ಕ ನಿರಂತರವಾಗಿ ಜರುಗಿದಂತೆ ಒಂದು ವೇಳೆಯಲ್ಲಿ ಎಲ್ಲರೂ ಒಂದೆಡೆ ಕೂಡುವ ಆಲೋಚನೆಯಲ್ಲಿ–ಬಸವಣ್ಣನವರ ಮನೆಯೇ ಆಯ್ಕೆಯಾಗಿರುವ ಸಂಪೂರ್ಣ ಸಾಧ್ಯತೆಯಿದೆ. ಏಕೆಂದರೆ, ಹಲವಾರು ಬಗೆಯ ಕಾಯಕದ ಸಾಮಾಜಿಕರನ್ನು ಆಗಿನ ಕಾಲದಲ್ಲಿ ತಮ್ಮ ಮನೆಯವರೆಗೂ ಬರಮಾಡಿಕೊಂಡು, ಜಗುಲಿಯವರೆಗೂ ಸ್ಥಳಾವಕಾಶ ಕೊಡುವ ಧೈರ್ಯ, ಮನಸ್ಸು ಇನ್ನೊಬ್ಬರಿಗೆ ಸಾಧ್ಯವಾಗಿರಲು ಅಸಾಧ್ಯವೆಂದೇ ಹೇಳಬೇಕು. ಅದು ಸಂಘಟನೆಯ ರೂವಾರಿ ಬಸವಣ್ಣನವರಿಗೆ ಮಾತ್ರ ಸಾಧ್ಯವಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಏಕೆಂದರೆ ಅದು ಅವರಿಗೆ ಮನಸಾ ಬೇಕಾದ ಸಂಗತಿಯಾಗಿತ್ತು. ಹೀಗೆ ಬಸವಣ್ಣನವರ ಮನೆ ಮಂಟಪದ ಸ್ಥಾನವಾಗಿರಲು ಸಾಧ್ಯವಿದೆ.

ಇಲ್ಲಿ ಗಂಡಸರ ಜೊತೆಗೆ ಹೆಂಗಸರೂ ಕೂಡಿದರು, ಚರ್ಚೆಯಲ್ಲಿ ಭಾವಗಹಿಸಿದರು. ಒಬ್ಬರ ನೋಡಿ ಒಬ್ಬರು ಬರೆಯಲು ಕಲಿತರು; ವಚನ ನಿರ್ಮಿಸಿದರು. ಸುಮಾರು ೪೦ ಜನ ಮಹಿಳೆಯರು ಮೊದಲನೆಯದಾಗಿ ಅದೂ ಒಂದೇ ವೇಳೆಗೆ–ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡರು. ಹೆಣ್ಣುಮಕ್ಕಳು ಕವಯತ್ರಿಯರಾಗಿ ಕಾಣುವುದೂ ವಚನ ರಚನೆಯಲ್ಲಿ. ಇನ್ನೊಂದೆಡೆ ಸಾಂಸ್ಕೃತಿಕ ಸಂದರ್ಭದಲ್ಲಿ–ಕೆಲಸದ ವೇಳೆಯಲ್ಲಿ ಹುಟ್ಟಿಕೊಂಡ ಜಾನಪದ ಕಾವ್ಯಕ್ಷೇತ್ರದಲ್ಲಿ.

'ಅನುಭವ ಮಂಟಪ' ಒಂದು ಮಹತ್ತರ ಕಮ್ಮಟ. ಅಲ್ಲಿ ಬಸವಣ್ಣನವರು ಕಟ್ಟಬಯಸಲು ಯೋಚಿಸಿದ, ಕನಸು ಕಂಡ ಸಮಾಜದ ಸಂಪೂರ್ಣ ಕಲ್ಪನೆಯ ಚರ್ಚೆ ನಡೆದಿದೆ. ರೂಪು ಪಡೆಯಲು ಹವಣಿಸಿದೆ. ಬಸವಣ್ಣನವರ ಮನೆ ಅನುಭವ ಮಂಟಪದ ಸಂಘಟನೆ, ಚಟುವಟಿಕೆಯಿಂದ 'ದಾಸೋಹ' ಮನೆಯಾಗಿ, ಮಠವಾಗಿ, ಮಹಾಮನೆಯಾಗಿ ಕರೆಯಿಸಿಕೊಂಡಿದೆ. ಸಹಜವಾಗಿ ಬಂದು ಹೋಗುವ ಶರಣ ಸಂಕುಳದ ಎಲ್ಲ ವ್ಯವಸ್ಥೆಯನ್ನು ಸ್ವತಃ ಮನೆಯವರೇ ವಹಿಸಿಕೊಂಡ ಸಾಧ್ಯತೆಯಿದೆ. ಇದು ಜಾನಪದ ಬುದಕು ಮತ್ತು ಹೋರಾಟಕ್ಕೆ ಒಂದು ಬಹು ದೊಡ್ಡ ಸಾಕ್ಷಿ. ಊಟೋಪಚಾರದ ವ್ಯವಸ್ಥೆ ಹೆಣ್ಣುಮಕ್ಕಳದಾದರೆ ಸಂಘಟನೆಯ ಭಾರ ಚನ್ನಬಸವಣ್ಣನದಾಗಿದೆ: "ಚನ್ನಬಸವನೆಂಬ ಪ್ರಸಾದಿಯ ಪಡೆದು ಅನುಭವಮಂಟಪವನ್ನು ಮಾಡಿ" ಎಂಬ ನೀಲಮ್ಮನ ಮಾತು ಇದಕ್ಕೆ ಸಾಕ್ಷಿಯಾಗಿದೆ.

*ನಿಮ್ಮ ಶರಣರ ಸಂಗದ ಸುಖವನೇನೆಂಬೆನು*
*ನಿಮ್ಮ ಶರಣರ ಕೂಡೆ ಸಮಗೋಷ್ಠಿಯ ಮಾಡುವ*
*ಸುಖವನುಪಮಿಸಲಮ್ಮೆನಯ್ಯಾ*
*ಕೂಡಲ ಸಂಗಮದೇವಾ, ನಿಮ್ಮ ಪ್ರಮಥರೆಲ್ಲ ನೆರೆದ*
*ಗಣತಿಂಥಿಣಿಯೊಳಗೆನ್ನನೆಂದೆಂದೂ ಅಗಲದಂತಿರಿಸಯ್ಯಾ*
*ನಾ ನಿಮ್ಮ ಧರ್ಮದ ಕವಿಲೆ.*

ಎಂಬ ವಚನದಿಂದ ಅನುಭವ ಮಂಟಪದಲ್ಲಿ ಹಲವಾರು ಜನ ಸೇರಿದ ಮತ್ತು 'ಸಮಗೋಷ್ಠಿ' ಮಾಡುತ್ತಿದ್ದ ಸಂಗತಿ ಗೊತ್ತಾಗುತ್ತದೆ. ಹೀಗೆ ಸಾಮೂಹಿಕ ಚರ್ಚೆ ಮತ್ತು ನಿರ್ಣಯಗಳ ಸಮಸ್ಯೆ ಬದುಕಿನ ದ್ಯೋತಕವಾಗಿದ್ದು, ಅಚ್ಚ ಜಾನಪದೀಯವೆನಿಸುತ್ತವೆ. ಹೀಗೆ ಅನುಭವ ಮಂಟಪದ ಹುಟ್ಟು ಮತ್ತು ಅದರ ಯೋಚನೆಗಳೆಲ್ಲ ಜಾನಪದ ನೆಲಗಟ್ಟಿನ ಮೇಲೆಯೇ ನಡೆದಿವೆ ಎಂಬುದು ಗಮನಾರ್ಹ.

(ಕೃಪೆ : ಜಾನಪದ)

○

## ಸಾಗರ ಗರ್ಭಕ್ಕೆ

ತತ್ತ್ವಜ್ಞಾನಿ ಖಲೀಲ್ ಗಿಬ್ರಾನ್‌ನ ಒಂದು ಸಣ್ಣ ಕಥೆ ಇದೆ: ದಿಷಾ ಕಣಿವೆಯಲ್ಲಿ ಒಂದು ಭಾರಿ ನದಿ ಹರಿಯುತ್ತದೆ. ಆ ಮಹಾನದಿಯನ್ನು ಸೇರಿಕೊಳ್ಳುವ ಎರಡು ಚಿಕ್ಕ ಹಳ್ಳಗಳು ಪರಸ್ಪರ ಮಾತನಾಡಿಕೊಳ್ಳುತ್ತವೆ. ಒಂದು ಹಳ್ಳ ಇನ್ನೊಂದು ಹಳ್ಳವನ್ನು "ಗೆಳೆಯಾ, ನೀನು ಹೇಗೆ ಬಂದೆ? ನಿನ್ನ ಪಥ ಹೇಗಿತ್ತು?" ಎಂದು ಕೇಳಿತು. ಅದಕ್ಕೆ ಆ ಇನ್ನೊಂದು ಹಳ್ಳ ಉತ್ತರಿಸಿ, "ನಾನು ಹರಿದು ಬಂದ ಪಥ ತುಂಬ ಅಡ್ಡಿ ಆತಂಕಗಳಿಂದ ಕೂಡಿತ್ತು. ಒಬ್ಬ ರೈತ ಜಲಾಶಯದ ನಾಲೆಯಿಂದ ತನ್ನ ಹೊಲಕ್ಕೆ ನೀರು ಹಾಯಿಸಿಕೊಳ್ಳಲು ಚಕ್ರಯಂತ್ರ (wheel roll) ಇಟ್ಟಕೊಂಡಿದ್ದ. ಆ ಚಕ್ರ ಮುರಿದುಹೋಯಿತು. ನೀರು ಹಾಯಿಸಿಕೊಳ್ಳುತ್ತಿದ್ದ ರೈತ ಸತ್ತುಹೋದ. ಅಲ್ಲಿಂದ ನಾನು ಹರಿದುಕೊಂಡು ಬಂದೆ. ದಾರಿಯುದ್ದಕ್ಕೂ ನಗರದವರ ಕೊಳೆ ಕೆಸರುಗಳನ್ನು ಹೊತ್ತು ಬರಬೇಕಾಯಿತು. ದಡದಲ್ಲಿ ಏನೊಂದೂ ಕೆಲಸ ಮಾಡದೆ ಬಿಸಿಲು ಕಾಯಿಸಿಕೊಂಡು ಹರಟೆ ಹೊಡೆಯುತ್ತಿದ್ದ ಸೋಮಾರಿಗಳು. ವಾಸ್ತವವಾಗಿ ನನ್ನ ಪ್ರಯಾಣ ಪ್ರಯಾಸದ ಪ್ರಯಾಣ. ನೆಮ್ಮದಿಯಿಲ್ಲದ ಪ್ರಯಾಣ. ಸಂಕಟದ ಪ್ರಯಾಣ. ನಾನು ಸೋತು ಹೋಗಿದ್ದೇನೆ. ಅದಿರಲಿ, ಗೆಳೆಯಾ ನಿನ್ನ ಪ್ರಯಾಣ ಹೇಗಿತ್ತು?" ಎಂದು ಕೇಳಿತು.

ಮೊದಲ ಹಳ್ಳ ಹೇಳಿತು: ನನ್ನ ಪಥ ನಿನ್ನ ವ್ಯಥೆಯಲ್ಲ. ನಾನು ಬೆಟ್ಟಗುಡ್ಡಗಳಿಂದ ಸುಗಂಧ ಪುಷ್ಪರಾಶಿಯ ಮಧ್ಯೆ, ಬಳುಕಿ ಬಾಗುವ ಹಸಿರು ಸಸ್ಯರಾಶಿಯ ಮಧ್ಯೆ ಹರಿದು ಬಂದೆ. ದಾರಿಯುದ್ದಕ್ಕೂ ಸ್ತ್ರೀ–ಪುರುಷರು, ಪ್ರಾಣಿ–ಪಕ್ಷಿಗಳು ನನ್ನ ನೀರು ಕುಡಿದು ತಣಿದು ಆನಂದಿಸಿದವು. ಚಿಕ್ಕ ಮಕ್ಕಳು ದಡದಲ್ಲಿ ನಿಂತು ಕಾಲಾಡಿಸಿ ನಕ್ಕು ನಲಿದವು. ನನ್ನ ಬಗೆಗೆ ಎಲ್ಲರಿಗೂ ಹರ್ಷೋತ್ಸಾಹ. ನನ್ನನ್ನು ಕುರಿತು ಕವಿಗಳು ಕವನ ಕಟ್ಟಿದರು, ಗಾಯಕ–ನೃತ್ಯಗಾರರು ಹಾಡಿ ಕುಣಿದರು. ಅದೊಂದು ಸಂತಸದ ಪ್ರಯಾಣ. ನಾನು ಗೆಲುವಾಗಿದ್ದೇನೆ. ಆದರೆ ನಿನ್ನ ಪ್ರಯಾಣ ಪಥ ಅಷ್ಟು ಸುಖವಾಗಿಲ್ಲದಿದ್ದುದು ಎಂತಹ ವಿಷಾದದ ಸಂಗತಿ".

ಈ ಎರಡೂ ನದಿಗಳ ಮಾತನ್ನು ಕೇಳಿದ ದೊಡ್ಡ ನದಿ, ದೊಡ್ಡ ದನಿಯಲ್ಲಿ "ಓ ಗೆಳೆಯರೆ, ಬನ್ನಿ ಬನ್ನಿ. ನಾನು ಮಹಾಸಾಗರದತ್ತ ಹೋಗುತ್ತಿದ್ದೇನೆ. ನೀವೂ ನನ್ನ ಜೊತೆಗೆ ಬನ್ನಿ. ಇನ್ನು ಮಾತು ಬೇಡ. ನನ್ನ ಜೊತೆಯಲ್ಲಿರಿ. ನಾವೆಲ್ಲರೂ ಸಾಗರಕ್ಕೆ ಹೋಗೋಣ. ನಿಮ್ಮ ಹಿಂದಿನ ಅಲೆದಾಟ, ಅದು ಸಂಕಟವಿರಲಿ, ಸಂಭ್ರಮವಿರಲಿ, ಅದೆಲ್ಲವನ್ನೂ ನನ್ನಲ್ಲಿ ಮರೆಯಬೇಕು. ಬನ್ನಿ ಬನ್ನಿ, ನಾನು ಮತ್ತು ನೀವು ಎಲ್ಲರೂ ಆ ಸಾಗರಮಾತೆಯ ಹೃದಯ ಸೇರಿದಾಗ ನಮ್ಮೆಲ್ಲ ದೂರು–ದಾರಿಗಳೆಲ್ಲ ಮರೆತುಬಿಡುತ್ತವೆ. ನಾವು ಮಹತ್ತಿನಲ್ಲಿ ಲೀನವಾಗಿ ಮಹತ್ತೇ ಆಗಿಬಿಡುತ್ತೇವೆ !

ಒಮ್ಮೆ ಐಸಾಕ್ ನ್ಯೂಟನ್ ಧರಿಸಿದ್ದ ಕೋಟಿನಲ್ಲಿದ್ದ ತೂತನ್ನು ಒಬ್ಬಾತ ಬೆರಳು ಮಾಡಿ ತೋರಿಸಿ, "ನಿನ್ನ ಬಡತನ ಆ ತೂತಿನ ಮೂಲಕ ಇಣುಕಿ ನೋಡುತ್ತಿದೆ" ಎಂದನಂತೆ. ಅದಕ್ಕೆ ನ್ಯೂಟನ್ "ಇಲ್ಲ, ನಿನ್ನ ಮೂರ್ಖತನ ಅದರೊಳಗೆ ತೂರುತ್ತಿದೆ" ಎಂದು ಪ್ರತಿಕ್ರಿಯಿಸಿದನಂತೆ !

# ತೀರ್ಪು–ನ್ಯಾಯ–ಮಾನವೀಯತೆ

–ಮಹಂತಗೌಡ ಬಸವಣ್ಣ ಬಿರಾದಾರ್, ನ್ಯಾಯಾಧೀಶರು ಮತ್ತು ಮಹಾನಗರ ದಂಡಾಧಿಕಾರಿಗಳು

ಮಾನವ ಹುಟ್ಟಿದಂದಿನಿಂದ ಅಂತ್ಯದವರೆಗೂ ಒಂದಲ್ಲ ಒಂದು ವಿಧದ ಸಮಸ್ಯೆಗಳಲ್ಲಿ ಸಿಕ್ಕಿಹಾಕಿಕೊಂಡಿರುತ್ತಾನೆ. ಅಷ್ಟೇಕೆ ಅಧ್ಯಾತ್ಮಿಕ ವಿಚಾರದಲ್ಲಿ ಹೇಳುವುದಾದರೆ ಮಾನವನ ಹುಟ್ಟೇ ಒಂದು ದೊಡ್ಡ ಸಮಸ್ಯೆಯಾಗಿದೆ, ಸೃಷ್ಟಿಯಲ್ಲಿ. ಅದು ಹೇಗೆಂದರೆ, "ಹುಟ್ಟಿದ್ಯಾಕ ಸಾಯಕ, ಸತ್ಯಾಕ ಹುಟ್ಟುವುದಕ" ಎಂಬಂತೆ ಹುಟ್ಟು ಒಂದು ಮೂಲಭೂತ ಸಮಸ್ಯೆ. ಸಮಸ್ಯೆಯೆಂದಮೇಲೆ ಅದಕ್ಕೆ ಪರಿಹಾರ ಇದ್ದೇ ಇರುತ್ತದೆ. ಪರಿಹಾರ ಲೌಕಿಕವಾಗಿರಬಹುದು ಅಥವಾ ಅಲೌಕಿಕವಾಗಿರಬಹುದು. ಅಲೌಕಿಕವಾಗಿ ಅಥವಾ ಆಧ್ಯಾತ್ಮಿಕವಾಗಿ ವಿಚಾರ ಮಾಡಿದರೆ ಹುಟ್ಟನ್ನಡಗಿಸಲು ಯೋಗ ಸಾಧನೆಯಿಂದ ಮೋಕ್ಷ ಅಥವಾ ಜೀವನ್ಮುಕ್ತಿ ಹೊಂದುವುದು. ಅದುವೆ ಅಲೌಕಿಕ ತೀರ್ಪು ಅಥವಾ ಪರಿಹಾರ. ಅದಕ್ಕೆ ಶರಣರು "ಜಾಣರು–ಜಾಣರು ಇಹಪರ ಸಾಧಿಸುವವರು" ಎಂದಿದ್ದಾರೆ.

ಆದರೆ ನಾನಿಲ್ಲಿ ವಿಚಾರ ಮಾಡುತ್ತಿರುವುದು ಲೌಕಿಕ ಪರಿಹಾರ ಅಥವಾ ತೀರ್ಪಿಗೆ ಸಂಬಂಧಿಸಿದಂತೆ. ಇಂದಿನ ಪರಿಸ್ಥಿತಿಯಲ್ಲಿ ಬಹುತೇಕ ಜನ ವಸ್ತುಗಳ ವಾಸನಾಸ್ಥಿತಿಯ ಗುಲಾಮರಾಗಿ ಬಾಳುತ್ತಿದ್ದಾರೆ. ಅಂದರೆ, ಭೌತಿಕ ವಸ್ತುಗಳ ಭೋಗದ ಕಡೆ ವಾಲುತ್ತಿದ್ದಾರೆ. (This is materialistic world than spiritualistic world) ಈ ಮೊದಲೇ ಹೇಳಿದಂತೆ ಸಮಸ್ಯೆಗೆ ಪರಿಹಾರ ಇದ್ದೇ ಇರುತ್ತದೆ. ಪರಿಹಾರವನ್ನು ಕಂಡುಕೊಳ್ಳುವ ಪ್ರಯತ್ನ ಇಂದು ಆಗಬೇಕಾಗಿದೆ. ಆದರೆ ಪ್ರಾಮಾಣಿಕ ಪ್ರಯತ್ನಕ್ಕೆ ಕೈಹಾಕದೆ ಸರಳವಾಗಿ, ಸುಲಭವಾಗಿ ಹಾಗೂ ವಾಮ ಮಾರ್ಗದಿಂದ ಪರಿಹಾರ ಕಂಡುಕೊಳ್ಳುವತ್ತ ನಮ್ಮ ಲಕ್ಷ್ಯ ಕೇಂದ್ರಿಕೃತವಾಗಿದೆ. ಅಂತ್ಯ ಹಾಗೂ ಅದನ್ನು ಸಾಧಿಸಲು ಅಥವಾ ಪಡೆಯುವ ವಿಧಾನ ಕ್ರಮ ನೇರ ಹಾಗೂ ಸರಳ (Fair play) ವಾಗಿರಬೇಕು (means should justify the end).

"ತೀರ್ಪು" ಎಂದಾಕ್ಷಣ ನಮ್ಮೆಲ್ಲರ ಗಮನ ನ್ಯಾಯಾಲಯಗಳು ನೀಡುವ ತೀರ್ಪಿನತ್ತ ಹರಿಯುವುದು ಸರ್ವೆಸಾಮಾನ್ಯ. ನ್ಯಾಯಾಲಯಗಳ ತೀರ್ಪು ಅಂದರೆ ವಸ್ತು ಅಥವಾ ವಿಷಯಗಳ ಸಂಗತಿಗಳ ಆಧಾರದ ಮೇಲೆ, ಅದಕ್ಕೆ ಅನ್ವಯಿಸುವ ಕಾನೂನು ಅಂಶದ ಜೊತೆಗೆ ಸಾಕ್ಷ್ಯಾಧಾರಗಳನ್ನು ಗಣನೆಗೆ ತೆಗೆದುಕೊಂಡು ನೀಡುವ ಒಂದು ಪ್ರಕ್ರಿಯೆ ಎನ್ನಬಹುದು. ಕೆಲವೊಮ್ಮೆ ಸಾಕ್ಷ್ಯಾಧಾರಗಳ ಕೊರತೆಯಿಂದಾಗಲೀ ಅಥವಾ ಕಾನೂನಿನ ಅಸ್ಪಷ್ಟತೆಯಿಂದಾಗಲೀ ಅಥವಾ ವಸ್ತು ಹಾಗೂ ವಿಷಯ ಸಂಗತಿಗಳ ಕೊರತೆಯಿಂದಾಗಲೀ ಅಥವಾ ಮತ್ಯಾವುದೇ ಕಾರಣದಿಂದಾಗಲೀ, ನ್ಯಾಯಾಲಯಗಳು ತೀರ್ಪನ್ನು ನೀಡಬಹುದೇ ಹೊರತು ನ್ಯಾಯವನ್ನಲ್ಲ. ಉದಾಹರಣೆಗಾಗಿ, ಜೀವಹತ್ಯೆ ಅಥವಾ ಶೀಲಹರಣ ಪ್ರಕರಣದಲ್ಲಿ ನ್ಯಾಯಾಲಯ ಸಾಕ್ಷ್ಯಾಧಾರಗಳ ಕೊರತೆಯಿಂದ ಆರೋಪಿಯನ್ನು ನಿರ್ದೋಷಿಯೆಂದು ಬಿಡುಗಡೆಮಾಡಿ ತೀರ್ಪು ನೀಡಬಹುದು. ಆದರೆ ಜೀವಹತ್ಯೆ ಆದದ್ದು, ಶೀಲಹರಣವಾದದ್ದು ನಿಜವಿರುತ್ತದೆ–ತಾಯಿಗೆ ತನ್ನ ಮಗುವಿನ ತಂದೆ ಯಾರು ಎಂದು ಗೊತ್ತಿರುವ ಹಾಗೆ. ಆದರೆ ಅದೇ ನ್ಯಾಯವಲ್ಲ. ಅಂದರೆ, ಈ ಎರಡೂ ಉದಾಹರಣೆಗಳಲ್ಲಿ, ಜೀವಹತ್ಯೆ ಮತ್ತು ಶೀಲಹರಣವಾದದ್ದು ಸೂರ್ಯನ ಬೆಳಕಿನಷ್ಟೇ ಸತ್ಯ. ಆದ್ದರಿಂದ ನ್ಯಾಯವೇ ಬೇರೆ; ತೀರ್ಪೇ ಬೇರೆ.

ಒಂದು ಪ್ರಕರಣದಲ್ಲಿ ತೀರ್ಪು ನೀಡುವುದು ಕಾನೂನಿನ ಪ್ರಕ್ರಿಯೆ ಹಾಗೂ ಕರ್ತವ್ಯ. ಆದರೆ ತೀರ್ಪಿನ ಜೊತೆಗೆ ನ್ಯಾಯ ನೀಡುವುದು ಕಾನೂನಿನ ಪ್ರಕ್ರಿಯೆ ಹಾಗೂ ಕರ್ತವ್ಯವಷ್ಟೇ ಅಲ್ಲ, ಜೊತೆಗೆ ಸಾಮಾಜಿಕ ಹೊಣೆಗಾರಿಕೆ ಹಾಗೂ ಕರ್ತವ್ಯವೂ ಹೌದು. ಅಂದರೆ ನ್ಯಾಯವನ್ನೊಳಗೊಂಡಿರದ ತೀರ್ಪು ನೀಡುವುದು ಸಾಮಾಜಿಕ ಕರ್ತವ್ಯ ಹಾಗೂ ಜವಾಬ್ದಾರಿಯಿಂದ ವಿಮುಖವಾದಂತೆ. ಹಾಗಾಗಿ ಇಂದು ಸಮಾಜದಲ್ಲಿ ಘಾತುಕ ಶಕ್ತಿಗಳು ಹಾಗೂ ಅಪರಾಧಿಗಳು ಹೆಚ್ಚಾಗಿದ್ದಾರೆ. ಕಾರಣ, ಅಂತಹ ಶಕ್ತಿಗಳನ್ನು ಹಾಗೂ ಅಪರಾಧಿಗಳನ್ನು ಕಡಿಮೆ ಮಾಡಲು ನೈತಿಕವಾಗಿ ತಪ್ಪಿತಸ್ಥ [Moral Conviction is not Legal Conviction] ನೆಂದು ನಿರ್ಣಯಿಸಿ ತೀರ್ಪು ನೀಡಲು ಶಾಸನದ ಬೆಂಬಲ ಬೇಕಾಗುತ್ತದೆ. ಆದರೆ ಹಾಲಿ ಪರಿಸ್ಥಿತಿಯಲ್ಲಿ ಅಂತಹ ಶಾಸನಗಳು ಇರುವುದಿಲ್ಲ. ಕೆಲವು ನ್ಯಾಯಾಧೀಶರು ನೈತಿಕವಾಗಿ ತಪ್ಪಿತಸ್ಥರೆಂದು ಕೆಲವೊಂದು ಪ್ರಕರಣದಲ್ಲಿ ನಿರ್ಣಯಿಸಿ ತೀರ್ಪು ನೀಡಿದರೂ, ಮೇಲ್ಮನವಿಯಲ್ಲಿ ಅಂತಹ ತೀರ್ಪುಗಳು ಕಾನೂನು ಸಮ್ಮತ ತೀರ್ಪುಗಳಾಗಲಾರವು. ಕಾರಣ, ನೈತಿಕವಾಗಿ ತಪ್ಪಿತಸ್ಥನೆಂದು ನಿರ್ಣಯಿಸಿ ತೀರ್ಪುನೀಡಲು ಬೆಂಬಲಿಸುವ ಶಾಸನಗಳನ್ನು ರೂಪಿಸಬೇಕು ಹಾಗೂ ಅಥವಾ ಹಾಲಿ ಶಾಸನಗಳಿಗೆ ತಿದ್ದುಪಡಿ ತರಬಹುದು. ಏಕೆಂದರೆ ನ್ಯಾಯಾಧೀಶರು ನೀಡುವ ತೀರ್ಪುಗಳು ನ್ಯಾಯದಿಂದ ಕೂಡಿರಬೇಕು.

ನ್ಯಾಯವು ತೀರ್ಪನ್ನು ಒಳಗೊಂಡಿರುತ್ತದೆ. ಆದರೆ ತೀರ್ಪು ಸದಾ ನ್ಯಾಯವನ್ನೊಳಗೊಂಡಿರುತ್ತದೆಯೆಂದು ಹೇಳಲಾಗದು. ಎರಡನ್ನು







ತುಲನೆ ಮಾಡಿದರೆ ನ್ಯಾಯವು ತೀರ್ಪಿಗಿಂತ ಸರ್ವಶ್ರೇಷ್ಠ ಹಾಗೂ ಶ್ಲಾಘನೀಯ.

ಇನ್ನು ಮಾನವೀಯತೆ ವಿಷಯಕ್ಕೆ ಬರೋಣ. "ಮಾನವೀಯತೆ," ಪದಪುಂಜ ಸೂಚಿಸುವಂತೆ ಬಹು ವಿಸ್ತಾರವಾದದ್ದು. ಇದು ಸರ್ವವನ್ನೊಳಗೊಂಡಿರುತ್ತದೆ (ಕಾನೂನು, ನ್ಯಾಯ, ನೀತಿ, ಧರ್ಮ ತತ್ವಾದರ್ಶಗಳು ಹಾಗೂ ಮೌಲ್ಯಗಳು ಇತ್ಯಾದಿ, ಇತ್ಯಾದಿ). ಉದಾ: ಕಿಲಾರಿ ಭೂಕಂಪ ಹಾಗೂ ಗುಜರಾತ್ ಭೂಕಂಪ. ಮಹಾರಾಷ್ಟ್ರದ ಕಿಲಾರಿಯಲ್ಲಿ ಭೂಕಂಪವಾದಾಗ ಇಡೀ ಗ್ರಾಮವೇ ಸರ್ವನಾಶವಾದಾಗ ವಿಶ್ವದೆಲ್ಲೆಡೆಯಿಂದಲೂ ದೇಶ, ಭಾಷೆ, ವರ್ಗ, ವರ್ಣ, ಜಾತಿ, ಮತ, ಪಂಥ ಹಾಗೂ ಜನಾಂಗ ಯಾವ ಭೇದ ಭಾವವಿಲ್ಲದೇ ಸಾಗರ ರೂಪದಲ್ಲಿ ಪರಿಹಾರ ಹರಿದು ಬಂತು. ಶುದ್ಧಾಂತಃಕರಣದಿಂದ ಹೊರಚಿಮ್ಮುವ ಚೇತನಕ್ಕೆ ಮಾನವೀಯತೆ ಎನ್ನಬಹುದು. ಮಾನವೀಯತೆಯು ತೀರ್ಪು, ನ್ಯಾಯ ಹಾಗೂ ಇನ್ನೂ ಅನೇಕ ಸದ್ಗುಣಗಳ ಸಮೂಹವನ್ನು ತನ್ನ ಗರ್ಭದಲ್ಲಿರಿಸಿಕೊಂಡಿರುತ್ತದೆ. ಮಾನವೀಯತೆಗೆ ದೇಶದ, ಭಾಷೆಯ, ಕೋಮಿನ, ಜನಾಂಗದ, ವರ್ಣ ಅಥವಾ ವರ್ಗದ ಸೋಂಕಿರುವುದಿಲ್ಲ. ಮಾನವೀಯತೆಯು ಇಂತಹ ಸಂಕೀರ್ಣ ಅನಿಸಿಕೆಗಳ ಅಥವಾ ಭಾವನೆಗಳ ಮೇರೆಯನ್ನು ಮೀರಿರುತ್ತದೆ. ಸಕಲ ಜೀವಿಗಳ ಹಿತವೆ ಪ್ರಾಮುಖ್ಯವಾಗಿರುತ್ತದೆ. ೧೨ನೆಯ ಶತಮಾನದ ಶರಣ ಸಮೂಹ, ಸೃಷ್ಟಿಯಲ್ಲಿ ಪ್ರತಿಯೊಂದು ಜೀವಿಯೂ ಇಂತಹ ಸದ್ಗುಣಗಳನ್ನು ಹೊಂದಿರಬೇಕೆಂದು ಹೃದಯಾರೆ ಆಶಿಸಿತ್ತು. ○

# ಮೌಲ್ಯಗಳ ಜಾಗತೀಕರಣ

"ಯತ್ರ ವಿಶ್ವಂ ಭವತಿ ಏಕ ನೀಡಂ" ಇಡೀ ವಿಶ್ವ ಒಂದು ಗೂಡು ಎಂಬುದು ಋಗ್ವೇದದ ಹೃದಯಂಗಮ ಕಲ್ಪನೆ. ಇಲ್ಲಿ ಗೂಡು ಅನುಪಮ ಪ್ರತಿಮೆಯಾಗಿ ನಮ್ಮ ಮನ ಸೂರೆಗೊಳ್ಳುವುದು. ಇಡೀ ಜಗತ್ತು ಒಂದು ಗೂಡಾದರೆ, ಲೋಕದ ಜನರೆಲ್ಲ ಹಕ್ಕಿಗಳ ಹಾಗೆ ಇರಬೇಕಾಗುತ್ತದೆ. ಹಕ್ಕಿಗಳು ಸ್ವಾತಂತ್ರ್ಯದ ಪ್ರತೀಕವಾಗಿವೆ. ಅವುಗಳ ಮರಿಗಳೆಲ್ಲ ಒಂದೇ ಗೂಡಿನಲ್ಲಿರುವುದರಿಂದ ಸಹಬಾಳ್ವೆಯ ಪ್ರತೀಕವಾಗಿವೆ. ಎಲ್ಲ ಗಡಿಗಳನ್ನು ದಾಟಿ ಹಾರುವುದಕ್ಕಾಗಿಯೇ ಅವುಗಳಿಗೆ ರೆಕ್ಕೆಗಳಿವೆ. ಹಕ್ಕಿಗಳೆಲ್ಲ ಒಂದಾಗಿ ಹಾರುವುದರಿಂದ ಕುಟುಂಬ ಪ್ರಜ್ಞೆಯನ್ನು ಮೂಡಿಸುತ್ತವೆ. ಅವು ಹಾರುವಾಗ ಎದುರಿಗೆ ಬರುವ ಹಕ್ಕಿಯ ಹಿಂಡಿಗೆ ತೊಂದರೆಯಾಗದಂತೆ ಎಚ್ಚರಿಕೆ ವಹಿಸುತ್ತವೆ. ಅವು ಬೆಳಿಗ್ಗೆ ತಮ್ಮ ಆಹಾರವನ್ನು ತಾವೇ ಹುಡುಕಿಕೊಂಡು ಹೋಗುತ್ತವೆ. ಹೋಗುವ ಮುನ್ನ ಚಿಲಿಪಿಲಿ ಹಾಡಿ ಜೀವನೋತ್ಸಾಹ ಪ್ರಕಟಿಸುತ್ತವೆ. ರಾತ್ರಿ ಮರಳಿದಾಗ ಗೂಡು ಸೇರಿದ ಸಂಭ್ರಮವನ್ನು ವ್ಯಕ್ತಪಡಿಸುತ್ತವೆ.

ಹಕ್ಕಿಗಳು ಕೂಡ ಸಾಯುತ್ತವೆ. ಆದರೆ ಕೋಮುಗಲಭೆಗಳಲ್ಲಿ ಅಲ್ಲ. ಜಾತಿ ಸಂಘರ್ಷಗಳೂ ಅಲ್ಲ. ಮಂದಿರ ಮಸೀದಿಗಳಿಗಾಗಿ ಮಾನವರು ಜೀವ ಕೊಡಲು ಮತ್ತು ಜೀವ ತೆಗೆಯಲು ಸಿದ್ಧರಾಗುವ ಸಂದರ್ಭದಲ್ಲಿ ಕೂಡ ಅವು ಹಾರಾಡುತ್ತ ಮಂದಿರಗಳ ಮೇಲೂ ಕೂಡುತ್ತವೆ, ಮಸೀದಿಗಳ ಮೇಲೂ ಕೂಡುತ್ತವೆ.

"ವಸುಧೈವ ಕಟುಂಬಕಂ" (ಜಗತ್ತು ಒಂದು ಕುಟುಂಬ) ಎಂಬುದು ನಮ್ಮ ಮಂತ್ರವಾದಾಗ ನಮ್ಮ ಮನಸ್ಸು ಹಕ್ಕಿಯಂತಾಗುತ್ತದೆ. ನಮ್ಮ ನೋಟ ಜೀವಕಾರುಣ್ಯದಿಂದ ತುಂಬುತ್ತದೆ. ಇಡೀ ಜಗತ್ತು ಅಲ್ಲಾಹನ ಕುಟುಂಬ ಎಂಬ ಇಸ್ಲಾಮಿನ ಮಾತಿಗೆ ಬೆಲೆ ಬರುತ್ತದೆ. "ಆನೋ ಭದ್ರಾಃ ಕೃತವೋ ಯಂತು ವಿಶ್ವತಃ" (ಉದಾತ್ತ ವಿಚಾರಗಳು ನಮಗೆ ಎಲ್ಲೆಡೆಯಿಂದ ಬರಲಿ) ಎಂಬ ಋಗ್ವೇದದ ಆಶಯ ಈಡೇರುತ್ತದೆ. "ಮನುಷ್ಯಜಾತಿ ತಾನೊಂದೆ ವಲಂ" (ಮನುಷ್ಯ ಜಾತಿ ಒಂದೇ ಸತ್ಯ) ಎಂಬ ಪಂಪ ಮಹಾಕವಿಯ ಒಳನೋಟವು ವಿಶ್ವನೋಟವಾಗುತ್ತದೆ.

ದತ್ತ ತತ್ತ್ವವು ಅವಧೂತ ಸಂಪ್ರದಾಯದ ತತ್ತ್ವವಾಗಿದೆ. ಇಡೀ ವಿಶ್ವವನ್ನು ಒಂದಾಗಿ ನೋಡುವ ಆಧ್ಯಾತ್ಮಿಕ ಮೌಲ್ಯಗಳ ಜಾಗತೀಕರಣದ ತತ್ತ್ವವಾಗಿದೆ. "ವೇದಾ ನ ಲೋಕೋ ನ ಸುರಾ ನ ಯಜ್ಞಾ ವರ್ಣಾಶ್ರಮೋ ನೈವ ಕುಲಂ ನ ಜಾತಿಃ ನ ಧೂಮಮಾರ್ಗೋಃ ನ ಚ ದೀಪ್ತಿಮಾರ್ಗೋಃ ಬ್ರಹ್ಮೈಕ್ಯ ರೂಪಂ ಪರಮಾರ್ಥ ತತ್ತ್ವಮ್" (ವೇದಗಳಾಗಲೀ, ಲೋಕಗಳಾಗಲೀ, ದೇವತೆಗಳಾಗಲೀ, ಯಜ್ಞಗಳಾಗಲೀ, ಧೂಮಮಾರ್ಗವಾಗಲೀ, ದೀಪ್ತಿಮಾರ್ಗವಾಗಲೀ ಪರಮಗುರಿ ಅಲ್ಲ. ಏಕರೂಪವಾಗಿರುವ ಬ್ರಹ್ಮವೊಂದೇ ಪರಮಾರ್ಥತತ್ತ್ವ) ಎಂದು ಅವಧೂತಗೀತೆ ಸಾರಿದೆ.

–ರಂಜಾನ್ ದರ್ಗಾ, ಗುಲ್ಬರ್ಗ



# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನಲ್ಲಿ
# ೨೦೦೪-೨೦೦೫ನೇ ಸಾಲಿನಲ್ಲಿ ಸಾಹಿತ್ಯ ದತ್ತಿ ಸ್ಥಾಪಿಸಿದ ದಾನಿಗಳು

| ಕ್ರ.ಸಂ. | ದತ್ತಿ ದಾನಿಗಳ ಹೆಸರು ಮತ್ತು ವಿಳಾಸ | ದತ್ತಿ ಹಣ (ರೂ.ಗಳು) |
|---|---|---|
| ೧. | ಶ್ರೀ ಜಿ.ಬಿ. ಗಂಗಾಧರಪ್ಪ, ಅಡಿಕೆ ಮತ್ತು ತಂಬಾಕು ವ್ಯಾಪಾರಿಗಳು, ಹೆಚ್. ಸಿದ್ದಯ್ಯ ರಸ್ತೆ ಶಿವಮೊಗ್ಗ-೫೭೭ ೨೦೧ | ೧೦,೦೦೦-೦೦ |
| ೨. | ಶ್ರೀಮತಿ ಸುಶೀಲಾ ಮತ್ತು ಶ್ರೀ ಸಿ.ಆರ್. ದೇವೇಂದ್ರಪ್ಪ, "ಸುಶೀಂದ್ರ", ೧ನೆಯ ಕ್ರಾಸ್, ೨ನೆಯ ಸ್ಟೇಜ್ ವಿನೋಬನಗರ, ಶಿವಮೊಗ್ಗ - ೫೭೭ ೨೦೪. | ೧೦,೦೦೦-೦೦ |
| ೩. | ಶ್ರೀಮತಿ ಸುಶೀಲಾ ಸದಾಶಿವಪ್ಪ, 'ರಜತಗಿರಿ', ೬೦ ಅಡಿ ರಸ್ತೆ, (ಟ್ಯಾಂಕ್ ರಸ್ತೆ), ಪೋಲಿಸ್ ಚೌಕಿ ಹತ್ತಿರ ವಿನೋಬನಗರ, ಶಿವಮೊಗ್ಗ - ೫೭೭ ೨೦೪. | ೧೦,೦೦೦-೦೦ |
| ೪. | ಶ್ರೀ ಜೆ.ಎನ್. ಓಂಕಾರಪ್ಪ, ಪಾಲುದಾರರು, ಅನಿಲ್ ಎಂಟರ್‌ಪ್ರೈಸಸ್, ಗೌರಿಶಂಕರ ನಿಲಯ, ಎ.ಎಸ್.ಕೆ. ರಸ್ತೆ ವೆಂಕಟೇಶ್ವರ ನಗರ, ೫ನೆಯ ಕ್ರಾಸ್, ಶಿವಮೊಗ್ಗ - ೫೭೭ ೨೦೧. | ೧೦,೦೦೦-೦೦ |
| ೫. | ಶ್ರೀಮತಿ ಇಂದಿರಾ ಮತ್ತು ಶ್ರೀ ಗುರುಪಾದಪ್ಪ ಮಾಗನೂರು, ಸಿದ್ಧಲಿಂಗೇಶ್ವರ ಅಂಡ್ ಕೋ. ನಂ. ೩೮೫೯ ಎಂ.ಸಿ.ಸಿ. ಎಕ್ಸ್‌ಟೆಂಡೆಡ್ 'ಬಿ' ಬ್ಲಾಕ್, ದಾವಣಗೆರೆ - ೫೭೭ ೦೦೪. | ೧೦,೦೦೦-೦೦ |
| ೬. | ಶ್ರೀಮತಿ ಪಾರ್ವತಮ್ಮ ರಾಜಣ್ಣ, ನಂ. ೪೪, ಮಂಜುನಾಥ ನಿಲಯ, ೧೪ನೆಯ ಕ್ರಾಸ್, ಸಂಜಯನಗರ ಬೆಂಗಳೂರು - ೫೬೦ ೦೯೪. | ೧೦,೦೦೦-೦೦ |
| ೭. | ಶ್ರೀ ಗಂಗಾಧರ, ಗುರು ಟೇಕ್ ಇನ್‌ವೆಸ್ಟ್‌ಮೆಂಟ್, ನಂ. ೮೭೪, ರೈನಿಯೋ ಹೌಸ್, ಒಂದನೆಯ ಮಹಡಿ ಡಾ. ಎಂ.ಸಿ. ಮೋದಿ ರಸ್ತೆ, ಪಶ್ಚಿಮ ಕಾರ್ಡ್ ರಸ್ತೆ, ಬೆಂಗಳೂರು - ೫೬೦ ೦೮೬. | ೨,೦೦,೦೦೦-೦೦ |
| ೮. | ಶ್ರೀ ಹೆಚ್.ಎಂ. ಮಲ್ಲಪ್ಪ, ಹುಣಸಘಟ್ಟ ಹೆಚ್.ಎಂ. ಮಲ್ಲಿಕಾರ್ಜುನಪ್ಪ, ಸಮಾಜಸೇವಾ ಪ್ರತಿಷ್ಠಾನ ಅಶೋಕ ರಸ್ತೆ, ಶಿವಮೊಗ್ಗ - ೫೭೭ ೨೦೨. | ೫೦,೦೦೦-೦೦ |
| ೯. | ಶ್ರೀ ವೀರಭದ್ರಪ್ಪ, S/o ಬಸವಲಿಂಗಪ್ಪ, 'ನಂದಿ' ಹೆಚ್.ಎಂ.-೨, ನಿಜಲಿಂಗಪ್ಪ ಕಾಲೋನಿ, ರಾಯಚೂರು. | ೧೦,೦೦೦-೦೦ |

## ನೂತನ ಜಿಲ್ಲಾ ಅಧ್ಯಕ್ಷರುಗಳು

**ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಹಾಸನ, ತುಮಕೂರು ಮತ್ತು ಚಿಕ್ಕಮಗಳೂರು ಜಿಲ್ಲಾ ಘಟಕಾಧ್ಯಕ್ಷರುಗಳನ್ನಾಗಿ ಕೆಳಕಂಡವರನ್ನು ನೇಮಿಸಲಾಗಿದೆ:**

ಹಾಸನ ಜಿಲ್ಲೆ : ಡಾ. ಎಚ್.ಎನ್. ಮಲ್ಲೇಶಗೌಡ, ನಂ. ೨೮೦, ದೇವಗಿರಿ, ವಿದ್ಯಾನಗರ, ಹಾಸನ.
ದೂರವಾಣಿ : ೦೮೧೭೨-೨೬೯ ೬೮೯, ಮೊಬೈಲ್ : ೯೪೪೮೭ ೯೩೧೭೭

ತುಮಕೂರು ಜಿಲ್ಲೆ : ಡಾ. ಡಿ.ಎನ್. ಯೋಗೇಶ್ವರಪ್ಪ, 'ಚಿತ್ಕಲಾ' ೮ನೆಯ ಕ್ರಾಸ್, ೪ನೆಯ ಮೇನ್, ಸೋಮೇಶ್ವರಪುರಂ, ತುಮಕೂರು.
ದೂರವಾಣಿ : ೦೮೧೬ –೨೨೭೪೫೩೫

ಚಿಕ್ಕಮಗಳೂರು ಜಿಲ್ಲೆ : ಶ್ರೀ ಅಜ್ಜಂಪುರ ಜಿ. ಸೂರಿ, ಶ್ರೀ ಗುರು ನಿಲಯ, ಕೆ.ವಿ. ಕಾಲೋನಿ, ಕಡೂರು, ಚಿಕ್ಕಮಗಳೂರು ಜಿಲ್ಲೆ
ದೂರವಾಣಿ : ೦೮೨೬೭ – ೨೨೨ ೧೩೧, ಮೊಬೈಲ್ : ೯೪೪೮೬ ೫೮೩೩೬







# ಲಿಂಗವಾದರೂ....

*ಕಂದಿಸಿ ಕುಂದಿಸಿ ಬಂಧಿಸಿ ನೋಯಿಸಿ*
*ಕಂಡ ಕಂಡವರ ಬೇಡಿ ತಂದು*
*ಜಂಗಮಲಿಂಗಕ್ಕೆ ಮಾಡಿಹೆನೆಂಬ*
*ದಂದುಗದ ಮಾಟಕ್ಕೆ ಲಿಂಗನೈವೇದ್ಯ ಸಲ್ಲದು*
*ತನು ಕರಗಿ, ಮನ ಬಳಲಿ ಬಂದ ತೆರದನುವರಿದು*
*ಸಂದಿಲ್ಲದೆ ಸಂಶಯವಿಲ್ಲದೆ*
*ಜಂಗಚಲಿಂಗಕ್ಕೆ ದಾಸೋಹವೇ ಮಾಟ*
*ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು. ಲಿಂಗಾರ್ಪಿತವಲ್ಲದೆ*
*ದುರಾಸೆಯಿಂದ ಬಂದುದು ಅನರ್ಪಿತ*
*ಇದು ಕಾರಣ, ಸತ್ಯ ಶುದ್ಧ ಕಾಯಕದ ನಿತ್ಯ ದ್ರವ್ಯವಾದಡೆ*
*ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯಾ!*

***–ನುಲಿಯ ಚಂದಯ್ಯ***

'ನಡೆ ನುಡಿ ಶುದ್ಧವಿಲ್ಲದಿದ್ದರೆ ಲಿಂಗವಾದರೂ ತಪ್ಪನೊಳಕೊಳ್ಳೆ' ಎಂದು ನಿಷ್ಠುರದಿಂದ ನುಡಿದ ಶರಣ ನುಲಿಯ ಚಂದಯ್ಯನಿಗೆ ಸಂಬಂಧಿಸಿದ ಪ್ರಸಂಗವಿದು.

ನದಿ ದಂಡೆಯ ಮೆದೆ ಹುಲ್ಲು, ಅರಣ್ಯದ ಮರದ ತೊಗಟೆಯಂತಹ ವಸ್ತುಗಳಿಂದ ಹಗ್ಗ ಕಣ್ಣಿ ಹೊಸೆದು ಮಾರುವ ಕಾಯಕವಾಗಿದ್ದ ಕಾರಣ ನುಲಿಯ ಚಂದಯ್ಯನೆಂಬ ಹೆಸರು. 'ಸತ್ಯ ಶುದ್ಧ ಕಾಯಕದಿಂದಲೇ ಜೀವನ್ಮುಕ್ತಿ' ಎನ್ನುವುದು ಅವನ ಸಿದ್ಧಾಂತವಾಗಿತ್ತು. ಹಗ್ಗ ಕಣ್ಣಿಯ ಮಾರಿ ಬಂದುದರಿಂದ ಜಂಗಮ ದಾಸೋಹ ಸೇವೆ ಸಲ್ಲಿಸುತ್ತಿದ್ದ.

ನಿತ್ಯ ಕಾಯಕದಂತೆ ಒಂದು ದಿನ ನುಲಿಯ ಚಂದಯ್ಯ ನದಿ ದಂಡೆಯಲ್ಲಿ ಹುಲಗಲು ಕೀಳುತ್ತಿದ್ದಾಗ ಅವನು ಧರಿಸಿದ್ದ ಕೊರಳ ಲಿಂಗ ಆಕಸ್ಮಿಕವಾಗಿ ನದಿಯ ನೀರಿನಲ್ಲಿ ಉರುಳಿ ಬಿದ್ದಿತು. ಕಾಯಕನಿರತ ಚಂದಯ್ಯ ಅದನ್ನು ಗಮನಿಸಿಯೇ ಇರಲಿಲ್ಲ. ಹುಲ್ಲು ಹೊರೆ ಹೊತ್ತು ಬರುವಾಗ ದಾರಿಯಲ್ಲಿ ಎದುರಾದ ಮಡಿವಾಳ ಮಾಚಯ್ಯನೆಂಬ ಮತ್ತೊಬ್ಬ ಶರಣ ಚಂದಯ್ಯನ ಕೊರಳಲ್ಲಿ ಲಿಂಗವಿಲ್ಲದುದನ್ನು ಗಮನಿಸಿ 'ಇದು ಶರಣರಿಗೆ ಸಲ್ಲ' ಎನ್ನುತ್ತಾನೆ. ಅದಕ್ಕೆ ಚಂದಯ್ಯ 'ಅಂಗವನ್ನು ಬಿಟ್ಟು ಅಗಲುವುದು ಲಿಂಗಕ್ಕೂ ಸಲ್ಲ' ಎನ್ನುತ್ತಾನೆ. 'ಬಿಟ್ಟು ಹೋಗಿರುವ ಆ ಲಿಂಗ ಮತ್ತೆ ತಾನೇ ಬಂದರೂ ನಾನು ನನ್ನ ಅಂಗಳಕ್ಕೂ ಬಿಟ್ಟುಕೊಳ್ಳುವುದಿಲ್ಲ' ಎಂದು ಕಠಿನವಾಗಿ ನುಡಿಯುತ್ತಾನೆ.

ಮಾಚಯ್ಯನಿಗೂ ಚಂದಯ್ಯನಿಗೂ ಲಿಂಗ ಪೂಜೆ, ಜಂಗಮ ಸೇವೆ, ಕಾಯಕ ನಿಷ್ಠೆಗಳಿಗೆ ಸಂಬಂಧಿಸಿ ವಾದ-ವಿವಾದ ನಡೆಯುತ್ತಿದ್ದಂತೆ, ನದಿಯಲ್ಲಿ ಉರುಳಿಹೋಗಿದ್ದ ಲಿಂಗವೇ ಪುರುಷಾಕಾರದಲ್ಲಿ ಬಂದು ಚಂದಯ್ಯನಲ್ಲಿ ಕ್ಷಮೆ ಕೇಳಿ ತನ್ನನ್ನು ಅಂಗೀಕರಿಸುವಂತೆ ಬಿನ್ನವಿಸಿಕೊಳ್ಳುತ್ತದಂತೆ! ಆದರೆ ಆ ಕಾಯಕಯೋಗಿ ಆ ಬಿನ್ನಹವನ್ನು ನಿರಾಕರಿಸುತ್ತಾನೆ. ಆಗ ಮಾಚಯ್ಯ ಮಧ್ಯಸ್ಥಿಕೆ ವಹಿಸಿ 'ಒಡೆಯ ಹೇಳಿದಂತೆ ಕೇಳಿಕೊಂಡಿರುವ' ಷರತ್ತಿನ ಮೇಲೆ ಚಂದಯ್ಯನನ್ನು ಒಪ್ಪಿಸಿ ಅವನೊಡನೆ 'ಲಿಂಗಯ್ಯ'ನನ್ನು ಕಳುಹಿಸಿಕೊಡುತ್ತಾನೆ.

ಮುಂದೊಂದು ದಿನ ಚಂದಯ್ಯ ತಾನು ಮಾಡಿದ ಹಗ್ಗ ಕಣ್ಣಿಗಳ ಹೊರೆಕಟ್ಟಿ ಅದನ್ನು ಮಾರಿಕೊಂಡು ಬರಬೇಕೆಂದು 'ಲಿಂಗಯ್ಯ'ನಿಗೆ ಸೂಚಿಸಿದ. ಆ ಲಿಂಗಯ್ಯ ಕಲ್ಯಾಣದ ಬೀದಿ ಬೀದಿಯಲ್ಲಿ ಅಡ್ಡಾಡಿ, 'ಹಗ್ಗ – ಕಣ್ಣಿ' ಎಂದು ಕೂಗಿದರೂ ಕೊಳ್ಳುವವರು ಯಾರೂ ಬರಲಿಲ್ಲ. ಕೊನೆಗೆ ಬಸವಣ್ಣನ ಮಹಾಮನೆಯ ಬಳಿಗೆ ಬಂದಾಗ 'ಹಗ್ಗ-ಕಣ್ಣಿ' ಕೂಗು ಕೇಳಿ ಬಸವಣ್ಣನೇ ನೂರು ವರಹ ಕೊಟ್ಟು ತರಿಸಿಕೊಳ್ಳುತ್ತಾನೆ.

'ಲಿಂಗಯ್ಯ'ನಿಗೆ ಹಿಗ್ಗೋ ಹಿಗ್ಗು. ಊಹೆಗೂ ನಿಲುಕದಷ್ಟು ಲಾಭ. 'ಒಡೆಯನಿಗೆ ಇದರಿಂದ ಸಹಜವಾಗಿ ಸಂತೋಷವುಂಟಾಗುತ್ತದೆ. ನನ್ನ ಹಿಂದಿನ ತಪ್ಪನ್ನು ಮನ್ನಿಸಿಬಿಡುತ್ತಾನೆ' ಎಂದು ಓಡಿ ಬಂದು, ತಾನು ತಂದ ನೂರು ವರಹಗಳನ್ನು ಚಂದಯ್ಯನ ಮುಂದಿಡುತ್ತಾನೆ. ಆದರೆ ನಡೆದದ್ದೇನು? ಒಡೆಯ ಸಂತೋಷಪಡಲಿಲ್ಲ. ಬದಲಾಗಿ ಅಸಮಾಧಾನಗೊಂಡ. 'ಇದು ಕಾಯಕಕ್ಕೆ ನ್ಯಾಯವಲ್ಲ. ಮೂರು ಹಾಗ ಬೆಲೆಬಾಳುವ ಹಗ್ಗಕ್ಕೆ ನೂರು ವರಹ ತರುವುದೆಂದರೆ ಏನು? ಇದು ತರವಲ್ಲ. ಹೆಚ್ಚಿನ ಹಣವನ್ನು ತಕ್ಷಣವೇ ಕೊಂಡವರಿಗೆ ಹಿಂದಿರುಗಿಸಿ ಬಾ' ಎಂದು 'ಲಿಂಗಯ್ಯ'ನಿಗೆ ಕಟ್ಟಪ್ಪಣೆ ಮಾಡಿದ. ಲಿಂಗಯ್ಯ ಒಡೆಯನ ಮಾತಿನಂತೆ ನಡೆದುಕೊಂಡರೂ ನುಲಿಯ ಚಂದಯ್ಯ ಅವನನ್ನು ಅನುಭವ ಮಂಟಪಕ್ಕೆ ಕರೆತಂದು ಹಿರಿಯ ಶರಣರ ಮುಂದೆ ನಿಲ್ಲಿಸಿ ವಿಚಾರಣೆಗೆ ಒಳಪಡಿಸುತ್ತಾನೆ.

ಅನುಭವ ಮಂಟಪದಲ್ಲಿ ಗಂಭೀರ ಚರ್ಚೆಯೇ ನಡೆಯುತ್ತದೆ. 'ಹೀಗೆ ಬಂದು-ಹೋಗುವ, ಕಾಯಕದ ನೆಲೆ – ನೀತಿ ತಿಳಿಯದ ಲಿಂಗದ ಅಗತ್ಯ ನನಗಿಲ್ಲ. ಎಲ್ಲವೂ ಜಂಗಮತತ್ತ್ವದಲ್ಲಿ ಅಡಗಿರುವ ಕಾರಣ ನನಗೆ ಜಂಗಮ ದಾಸೋಹವೇ ಸಾಕು' ಎಂದು ಚಂದಯ್ಯ ವಾದಿಸುತ್ತಾರೆ. ಹಿರಿಯ ಶರಣರು ಎಷ್ಟು ಹೇಳಿದರೂ ಅವನಿಗೆ ಸಮ್ಮತವಾಗಲಿಲ್ಲ.

ಈ ಸಮಸ್ಯೆ ಬಗೆಹರಿಸಲು ಪ್ರಭುದೇವ ಬಸವಣ್ಣನ ಕಡೆ ತಿರುಗಿದಾಗ, ಬಸವಣ್ಣ ಚಂದಯ್ಯನ ವಾದದ ಮುಂದೆ ಏನೂ ಮಾತನಾಡಲಾಗದೆ 'ಆ ಮಹಾಮಹಿಮನ ಘನವ ನಾನೆತ್ತ ಬಲ್ಲೆನಯ್ಯಾ ಪ್ರಭುವೆ' ಎಂದು ಬಿಡುತ್ತಾನೆ.

ಆದರೆ ಷಟ್‌ಸ್ಥಲ ಚಕ್ರವರ್ತಿ ಎನಿಸಿದ ಚನ್ನಬಸವಣ್ಣನ ಸರದಿ ಬಂದಾಗ, 'ಸಾಕಾರ ಲಿಂಗವೆ ಜಂಗಮದಂಗ' ಎಂದು ಹೇಳಿ, ಚಂದಯ್ಯನಿಗೆ ಅಂಗ – ಲಿಂಗದ ಅವಿರಳ ಸಂಬಂಧವನ್ನು ಸ್ಪಷ್ಟವಾಗಿ ಮನವರಿಕೆ ಮಾಡಿಕೊಡುತ್ತಾನೆ. ಚನ್ನಬಸವಣ್ಣನ ಸೈದ್ಧಾಂತಿಕ ಪ್ರತಿಪಾದನೆ ಚಂದಯ್ಯನಿಗೆ ಒಪ್ಪಿಗೆಯಾಗುತ್ತದೆ. ಲಿಂಗದ ನಿಜವನ್ನು ಅರ್ಥ ಮಾಡಿಕೊಂಡು ಮತ್ತೆ 'ಲಿಂಗಯ್ಯ'ನನ್ನು ಅಂಗೀಕರಿಸುತ್ತಾನೆ.

ಲಿಂಗವು ಅಂಗದ ರೂಪ ತಾಳುವುದು ಅವಾಸ್ತವ ಎನಿಸಿದರೂ, ಅದನ್ನು ಸಾಂಕೇತಿಕವಾಗಿಟ್ಟು ನೋಡಿದಾಗ ಒಂದು ವಾಸ್ತವ ಸತ್ಯದ ದರ್ಶನವಾಗುತ್ತದೆ. ಅದೊಂದು ಆನುಭಾವಿಕ ನೆಲೆ.

ಕಾಯಕ ನಿಷ್ಠೆ ಮತ್ತು ಅಂತರಂಗ ಶುದ್ಧಿಗಳು ವ್ಯಕ್ತಿಗೆ ದೇವರಿಗೂ ಸವಾಲು ಎಸೆಯುವ ಅನುಭಾವದೆತ್ತರವನ್ನು ತಂದುಕೊಡುತ್ತವೆ ಎಂಬುದಕ್ಕೆ ಈ ಪ್ರಸಂಗವೊಂದು ಪುರಾವೆಯಾಗುತ್ತದೆ.



## ಅಕ್ಕ ಅನ್ನಪೂರ್ಣ

೧

ಏನು ಬರೆಯಲಯ್ಯಾ ನಾನು
ನೀನು ಬರೆದುದನೇ ಓದಲಾಗಿಲ್ಲ ಇನ್ನೂ !

ಓಡುವ ಮೋಡವನೋದಲೇ?
ಸುಡುವ ಸೂರ್ಯನನೋದಲೇ?
ಹಾಡುವ ಕೋಗಿಲೆಯನೋದಲೇ?
ಹೊಳೆವ ಶಶಿಯನೋದಲೇ?
ಬೆಳೆವ ಸಸಿಯನೋದಲೇ?
ಸುರಿವ ಮಳೆಯನೋದಲೇ?
ಕಳೆದ ದಿನವನೋದಲೇ?
ಓದಿದಷ್ಟೂ ಓದದಿರುವುದುಳಿವ
ನಿನ್ನೀ ಅದ್ಭುತಪಾರ ಪ್ರಕೃತಿಯ
ಓದುವದೇ ಆಗಿಲ್ಲವಿನ್ನೂ.
ಮತ್ತೇನ ಬರೆಯಲಯ್ಯಾ,
ಬಸವಲಿಂಗ ಪ್ರಭುವೆ?
ಇಗೋ ಇದನೇ ಅರ್ಪಿಸುವೆ
ಮೊದಲ ವಚನವನಿಂದು–
ನಿನ್ನ ಕೈಯ ಲೆಕ್ಕಣಿಕೆ ನಾನಾಗಲೆಂದು
ಎಂದೆಂದಿಗೂ ನನ್ನ ಕೈ ಬಿಡದಿರೆಂದು !

೨

ನಾ ಬರೆಯೆನಯ್ಯಾ ನಿನ್ನ ಶರಣರ
ಸಾಹಿತ್ಯದಲಿ ಕೊರತೆಯಿದೆಯೆಂದು
ನಾ ಬರೆಯೆನಯ್ಯ
ಸಾಹಿತಿಯ ಸಾಲಿನಲಿ ಮೆರೆಯಲೆಂದು
ನಾ ಬರೆಯೆನಯ್ಯಾ
ಪ್ರಶಸ್ತಿ – ಪದವಿಗಳು ದೊರೆಯಲೆಂದು
ನಾ ಬರವೆನಯ್ಯಾ,
ಅಲ್ಪ ನಾನು ಅನಂತ ನೀನೆಂದು;
ನಾ ಬರೆವೆನಯ್ಯಾ ಬಸವಲಿಂಗ ಪ್ರಭುವೆ
ನನ್ನ ಚಿತ್ತ ನಿನ್ನ ಚರಣವ ಬಿಡದಿರಲೆಂದು !

೩

ಪ್ರೇಮಾಮೃತದ ಧಾರೆಯೆರೆಯುತ
ಪ್ರತಿಫಲಾಪೇಕ್ಷೆಯ ಮರೆಯುತ
ನಂಬಿದವರಿಗಿಂಬು ನೀಡುತ
ಸುಖ ದುಃಖಗಳ ಸಮನಾಗಿಸುತ
ಬಸವಲಿಂಗ ಪ್ರಭುವೆ, ಬಾಳು ಸವೆಯಲಿ
ನಿನ್ನೀ ಕಮ್ಮಟದಲಿ ಸಲುವ ನಾಣ್ಯವಾಗುತ !

೪

ಮನುಜರೆಲ್ಲ ಒಂದೇ, ದೇವನೊಬ್ಬನೆ ತಂದೆ
ಭೂಮಿ ಹೇಮ ಬಿಟ್ಟು ಹೋಗಬೇಕು ಹಿಂದೆ
ಸತ್ಕಾರ್ಯಗಳೇ ಕೊಂಡೊಯ್ಯುವವು ಮುಂದೆ
ಅರಿವು ಆಚಾರವಾಗುವ ದಾರಿ ಒಂದೇ
ಬಸವಲಿಂಗ ಪ್ರಭುವಿನ ಶರಣರ ಸಂಗವೆಂದೆ !

೫

ಬೇಡುವೆನಯ್ಯಾ ನಾ ನಿನ್ನನಿಂದು
ಸೋಲನ್ನು ಗೆಲುವಿನಲ್ಲಿ
ಶೋಕವನು ಸಂಗೀತದಲ್ಲಿ
ವೈರವನು ಪ್ರೇಮದಲ್ಲಿ ಬದಲಿಸುವ
ಸಹನಾ ಶಕ್ತಿಯ ನೀಡೆಂದು
ಬಸವಲಿಂಗ ಪ್ರಭುವೆ !

೬

ಚಿತ್ತವು ಅತ್ತಲಿತ್ತ ಹರಿಯದಿರಲಿ
ನಿತ್ಯವು ನಿನ್ನಡಿಯ ನೆನೆಯುತಿರಲಿ
ಸತ್ಯ ಶರಣರ ಸಂಗ ಬಯಸುತಿರಲಿ
ಬಸವಲಿಂಗ ಪ್ರಭುವೆ,
ನಿನ್ನ ಕೈಯ ಸೂತ್ರದ ಗೊಂಬೆಯಾಗಿರಲಿ !

**ನಂದೀಶ್ವರ ವಚನ**

ನಿತ್ಯ 'ಮಹಾಮನೆ' ಬೆಳಗು
ವಚನಕಾರರ ಬೆಡಗು
ಜನ್ಮಭೂಮಿಗೆ ಶಿರಬಾಗು
ಸತ್ಯವನು ಆಡುತಲಿ ನಗು
ಶ್ರೀ ನಂದೀಶ್ವರನ ಕೃಪೆಗೆ ಒಳಗಾಗು!

–ಗಮನ





## 'ಮುಳ್ಳಾಗದಿರುವಿಕೆ'

–ಶ್ರೀ ಪ್ರಭುಚನ್ನಬಸವ ಸ್ವಾಮೀಜಿ
ಶ್ರೀ ಮೋಟಗಿ ಮಠ, ಅಥಣಿ

ಹೋಮ ಹವನಗಳಿಗೆ ಸುರಿವ ತುಪ್ಪಕ್ಕಿಂತ
ಹಸಿದ ಹೊಟ್ಟೆಗಿತ್ತ ಹಳಸಿದನ್ನ ಪೂಜ್ಯವಯ್ಯ!
ಸ್ವತಂತ್ರಧೀರ ಸಿದ್ದೇಶ್ವರನ ಆಣೆ ನಿಮಗೆ;
ಬೆಂಕಿಗೆ ಸುರಿವ ತುಪ್ಪವ, ಕಲ್ಲಿಗೆರೆಯುವ ಹಾಲವ
ಕಾಗೆಗಿಕ್ಕುವ ಅನ್ನವ, ನೀರಿನಲ್ಲಿ ಸುರಿದ ಧಾನ್ಯವ
ಹಸಿದವರಿಗೆ ನೀಡಿ ಧನ್ಯರಾಗಿರಯ್ಯ

ದೇವರು ಧರ್ಮದ ಹೆಸರಿನಲ್ಲಿ, ಪುಣ್ಯ ಪಾಪದ ಕೂಪದಲ್ಲಿ ಪ್ರತಿಷ್ಠೆಯನ್ನೇ ಪಣವಾಗಿರಿಸಿಕೊಂಡ ಕೆಲವರನ್ನು ಡಾ॥ ಸಿದ್ಧಯ್ಯ ಪುರಾಣಿಕರು ಎಚ್ಚರಿಸುತ್ತಾರೆ.

ಹೌದು! ಇಂದು ದೇವರುಗಳ ನಾಮದಲ್ಲಿ ಆಗುತ್ತಿರುವ ನಷ್ಟವನ್ನ, ಹಾಳಾಗುತ್ತಿರುವ ಪೌಷ್ಟಿಕಾಂಶವನ್ನು ಅರೆಹೊಟ್ಟೆಗೂ ಇಲ್ಲದ ಬಡವರಿಗೆ ನೀಡಿದರೆ ಅದಕ್ಕಿಂತ ದೊಡ್ಡ ಧರ್ಮ ಮತ್ತೊಂದಿಲ್ಲ.

ನಿನ್ನ ನೆರೆಯವರನ್ನು ಪ್ರೀತಿಸು ಎಂದ ಜೀಸಸ್.
ನಿನ್ನೊಂದಿಗೆ ನನ್ನವರನ್ನೂ ಪ್ರೀತಿಸು ಎಂದ ಗುರುನಾನಕ.
ಇವ ನಮ್ಮವನೆಂದು ಗೌರವಿಸು ಎಂದ ಬಸವಣ್ಣ.
ದಯೆಯಿಂದ ಎಲ್ಲ ಆರಾಧಿಸು ಎಂದ ಬುದ್ಧದೇವ.

—ಹೀಗೆ ನಾಡಿನ ಪ್ರವಾದಿಗಳು ಮನುಕುಲವನ್ನು ಹಾಗು ಸಮಸ್ತಸಂಕುಲವನ್ನು ಪ್ರೀತಿಸು ಎಂದು ಹೇಳುತ್ತ ಎಲ್ಲರನ್ನೂ ಅಪ್ಪಿಕೊಂಡರು. ಆದರೆ, ಇಂದಿನ ಪ್ರಾಜ್ಞರೆನಿಸಿಕೊಂಡವರು ಹೀಗನ್ನುತ್ತಾರೆ; "ನಾವೇಕೆ ಇತರರನ್ನು ಪ್ರೀತಿಸಬೇಕು? ನಮ್ಮ ಬದುಕೇ ನಮಗೆ ಭಾರವಾಗಿರುವಾಗ ಸಮಯವೆಲ್ಲಿದೆ?" ಎಂದು ಮೂಗು ಮುರಿಯುತ್ತಾರೆ. ಆದರೆ, ಅದಕ್ಕೆ ಉತ್ತರವನ್ನು ನಮ್ಮ ಭಾರತೀಯ ಪರಂಪರೆ ಹೀಗೆ ನೀಡುತ್ತದೆ:

"ಮಾನವರು ಎಂದರೆ ಮಹಾದೇವನ ಪ್ರತಿನಿಧಿಗಳು. ನೀವು ಪ್ರೀತಿಸುವುದು ಕೇವಲ ಮನುಷ್ಯರನ್ನಲ್ಲ, ಅವರಲ್ಲಿರುವ ದೈವೀಶಕ್ತಿಯನ್ನು. ಹೀಗೆ ಗೌರವಿಸಿದರೆ ಮಾತ್ರ ಅವನೊಬ್ಬ ಮಹಾಮಾನವನಾಗಬಲ್ಲ.

ಮನುಷ್ಯ ಕೇವಲ ಬದುಕಿದರೆ ಸಾಲದು. ಒಳ್ಳೆಯದನ್ನು ಮಾಡುತ್ತ ಬದುಕಬೇಕಾಗುತ್ತದೆ. ಆ ಒಳ್ಳೆಯ ಕೆಲಸಗಳು ಅವನನ್ನು ಚಿರಕಾಲ ಬದುಕಿಸುತ್ತವೆ. ಹದ್ದಿನಂತೆ ನೂರು ವರ್ಷ ಬದುಕುವುದರಲ್ಲಿ ಆನಂದವಿಲ್ಲ, ನಾಲ್ಕಾರು ಜೀವಿಗಳಿಗೆ ನೆರವಾಗುವುದಾದರೆ ಮುಳ್ಳಾಗದಿರುವಿಕೆಯ ಮೊದಲ ಹಂತವದು!

ಮಾನವನು ನಿತ್ಯ ಮಂದಿರ, ಮಸೀದಿ, ಚರ್ಚ್, ಗುರುದ್ವಾರಗಳಿಗೆ ಹೋದಾಗ ಏನು ಮಾಡುತ್ತಾನೆ ಎನ್ನುವುದು ಮುಖ್ಯವಲ್ಲ, ಅಲ್ಲಿಂದ ಹೊರಗೆ ಬಂದಾಗ ಹೇಗಿರುತ್ತಾನೆ ಎನ್ನುವುದು ಮುಖ್ಯವಾಗುತ್ತದೆ. ಯಾಕೆಂದರೆ ಸಹಜವಾಗಿ ಮಂದಿರಕ್ಕೆ ಹೋದಾಗ ಭಕ್ತಿಭಾವ ಇದ್ದೇ ಇರುತ್ತದೆ. ನಿತ್ಯ ಬದುಕಿನಲ್ಲಿ ಮನಬಂದಂತೆ ಮುನ್ನಡೆಯುತ್ತಿದ್ದರೆ ಮಠ ಮಂದಿರಗಳಿಗೆ ಹೋಗುವ ಅಗತ್ಯವೇಯಿಲ್ಲ.

ಧರ್ಮ ಎಂದರೆ ಕೇವಲ ಕರ್ಪೂರ, ಗಂಟೆ, ಧೂಪ, ನೈವೇದ್ಯವಲ್ಲ; ನೆರೆಹೊರೆಯವರಿಗೆ, ದೀನದುರ್ಬಲರಿಗೆ, ಪ್ರಾಣಿ ಪಕ್ಷಿಗಳಿಗೆ ನೆರವಾಗುವುದೇ ನಿಜವಾದ ಮಾನವೀಯ ಧರ್ಮವಾಗುತ್ತದೆ.

ಜೀವನಪೂರ್ತಿ ಏನನ್ನೂ ಮಾಡದೆ ಕೈವಲ್ಯ ಮಾತನಾಡುವುದರಲ್ಲಿಯೇ ಬೀದಿ ಬೀದಿ ಸುತ್ತುವುದರಲ್ಲಿಯೇ ಕಾಲೆಳೆಯುವುದರಲ್ಲಿಯೇ ಹಾಳು ಹರಟೆಗಳಲ್ಲಿಯೇ ಕಾಲ ಕಳೆಯುವವರು ಅನೇಕರಿದ್ದಾರೆ.

ಆರು ಆರು ತಾಸು ಭಾಷಣ ಬಿಗಿಯುವುದಕ್ಕಿಂತ
ಹಾದಿಗೆ ಬಿದ್ದ ಮುಳ್ಳು ತೆಗೆಯುವುದೇ ಲೇಸು
ಮೂರು ಮೂರು ತಾಸು ಪೂಜೆ ಮಾಡುವುದಕ್ಕಿಂತ
ಬಡವರಿಗೆ ಗಂಜಿಯಾಗುವುದೇ ಕ್ಷೇಮ
ಊರುದ್ದ ದಾನ–ಧರ್ಮ ಮಾಡಿ ಮೆರೆಯುವುದಕ್ಕಿಂತ
ಮನೆಯಲ್ಲಿ ಮಲಗಿದ ತಾಯಿ ತಂದೆಗಳ ಸೇವೆ ಮಾಡುವುದೇ ಸಾರ್ಥಕವಾದ ಮೌಲ್ಯ ಎನ್ನುವುದನ್ನು ಎಲ್ಲರು ಮನಗಾಣಬೇಕಿದೆ.

ಮನುಷ್ಯರಾಗಿ ಮನುಷ್ಯನನ್ನೇ ಕೊಂದು ತಿಂದರೆ ಪ್ರಾಣಿಗಳಿಗೂ ನಮಗೂ ವ್ಯತ್ಯಾಸವಾದರೂ ಏನಿದೆ ಹೇಳಿ? ನಾವು ಭೂಮಿಯ ಮೇಲೆ ಬದುಕಲು ಅನರ್ಹರು. "ದಯೆಯ ಮಾತು" ಕೇವಲ ತುಟಿಯ ಮೇಲಿನ ತಂತ್ರವಾದರೆ ಸಾಲದು; ಕೃತಿಯಲ್ಲಿ ಅರಳುವ ಮಂತ್ರವಾಗಬೇಕು. ಆಗ ಮಾತ್ರ ಕಲ್ಯಾಣ ರಾಜ್ಯ ನಿರ್ಮಾಣ ಸಾಧ್ಯ.

# ಅಕ್ಕಮಹಾದೇವಿಯವರ ವಚನಗಳಲ್ಲಿ ವೈಜ್ಞಾನಿಕ ಅಂಶಗಳು
## ಜೀವೋತ್ಪಾದನೆಯ ಮೂಲ (Origin of life)



-ಡಾ. ವ್ಹಿ.ವ್ಹಿ. ಬಾಗಲಕೋಟಿ
ವಿಶ್ವಚೇತನ
ಕಲ್ಯಾಣ ಹೌಸಿಂಗ್ ಕಾಲನಿ
ಗೋಕಾಕ - ೫೯೧೩೦೭

ಶರಣೆ ಅಕ್ಕಮಹಾದೇವಿಯವರ ಒಂದು ವಚನ :

ಸಂಗದಿಂದಲ್ಲದೆ ಅಗ್ನಿ ಹುಟ್ಟದು,
ಸಂಗದಿಂದಲ್ಲದೆ ಬೀಜ ಮೊಳೆದೋರದು
ಸಂಗದಿಂದಲ್ಲದೆ ಹೂವಾಗದು
ಸಂಗದಿಂದಲ್ಲದೆ ಸರ್ವಸುಖದೋರದು
ಚೆನ್ನಮಲ್ಲಿಕಾರ್ಜುನಯ್ಯಾ,
ನಿಮ್ಮ ಮಹಾನುಭಾವಿಗಳ ಸಂಗದಿಂದಲಾನು
ಪರಮಸುಖಿಯಾದೆನಯ್ಯಾ[1]

ಮಹಾಶರಣೆ ಅಕ್ಕನು ತಾನು ಪರಮಸುಖಿಯಾಗಿರುವದು, ದೇವನ ಅನುಭಾವಿಗಳಾದ ಶರಣರ ಸಂಗದಿಂದ ಎಂಬ ಮಹತ್ವಪೂರ್ಣ ತತ್ವವನ್ನು ವಿವರವಾಗಿ, ಸರಳ ಉದಾಹರಣೆಗಳೊಂದಿಗೆ ಸ್ಪಷ್ಟಗೊಳಿಸಿದ್ದಾಳೆ. ಸರ್ವಜ್ಞ ಕವಿಯೂ ಕೂಡ "ಸಜ್ಜನರ ಸಂಗವು ಹೆಜ್ಜೇನು ಸವಿದಂತೆ" ಎಂದು ಅಕ್ಕನವರ ಅಭಿಪ್ರಾಯವನ್ನು ಪುಷ್ಟೀಕರಿಸಿದ್ದಾನೆ. ದೇವನ ಅನುಭಾವಿಗಳೊಡನೆಯ ಸಂಗಕ್ಕೆ ಬಸವಣ್ಣನವರೂ ಶರಣ ಗಜೇಶ ಮಸಣಯ್ಯನವರೂ ಅತ್ಯುಚ್ಚ ಸ್ಥಾನವನ್ನು ಕೊಟ್ಟಿದ್ದಾರೆ. ಅಕ್ಕಮಹಾದೇವಿಯವರಂತೆ, ಬಸವಣ್ಣನವರು, ತಮ್ಮ ವಚನ[2]ವೊಂದರಲ್ಲಿ ಕೂಡಲ ಸಂಗನ ಶರಣರ ಸಂಗವು ತಮಗೆ ಪರಮ ಸುಖ; ಅಲ್ಲದೆ ಶರಣರ ಅಗಲುವಿಕೆಯು ಪ್ರಾಣವಿಯೋಗವೆಂದಿದ್ದಾರೆ. ಇದೇ ಆಭಿಪ್ರಾಯವನ್ನು ಅಂದರೆ "ಶರಣರ ಸಂಗವು ಪ್ರಾಣ" ಎಂದು ಇನ್ನೊಬ್ಬ ಶರಣರಾದ ಗಜೇಶ ಮಸಣಯ್ಯವರೂ ಹೇಳಿ ಅಕ್ಕನೊಡನೆ ಸಹಮತ ವ್ಯಕ್ತಪಡಿಸಿದ್ದಾರೆ.

ಆದರೆ, ಅಕ್ಕನವರು ತಮ್ಮ ವಚನದಲ್ಲಿ ಕೊಟ್ಟ ವಿವಿಧ ಉದಾಹರಣೆಗಳಲ್ಲಿ ವೈಜ್ಞಾನಿಕ ನಿರೀಕ್ಷಣೆಗಳಿಂದ ಕೂಡಿದ ಸಿದ್ಧಾಂತವೊಂದು ಇದೆ ಎಂಬುದು ನಮಗೆ ಹೆಚ್ಚು ಪ್ರಸ್ತುತವಾದದ್ದು. ಘರ್ಷಣೆಯಿಂದ ಅಗ್ನಿಯ ಉತ್ಪನ್ನದ ಕಾಲಕ್ಕೆ ಎರಡು ವಸ್ತುಗಳ ನಡುವಿನ ಸಂಘರ್ಷ ಅಥವಾ ಸಂಗದ ಅವಶ್ಯಕತೆಯೂ ಉದಾಹರಣೆಯಾಗಿದೆ.

ನಮ್ಮ ಆಸಕ್ತಿಯನ್ನು ಹೆಚ್ಚಿಸುವ ಮತ್ತೊಂದು ಉದಾಹರಣೆಯನ್ನು ಹೇಳುತ್ತ "ಸಂಗದಿಂದಲ್ಲದೆ ಬೀಜ ಮೊಳೆದೋರದು" ಎನ್ನುವಲ್ಲಿ ಜೀವ ವಿಜ್ಞಾನದ ಒಂದು ಅತ್ಯಂತ ಪ್ರಮುಖ ತತ್ವವನ್ನೇ ತಿಳಿಸಿದ್ದಾರೆ. ಭೂಮಿಯಲ್ಲಿ ಇಟ್ಟ (ಬಿತ್ತಿದ) ಬೀಜವು ಮೊಳಕೆಯೊಡೆಯಬೇಕಾದರೆ, ಮಣ್ಣು, ನೀರು, ಸೂರ್ಯ ಪ್ರಕಾಶ, ಒಳ್ಳೆಯ ಬೆಳೆಗೆ ಗೊಬ್ಬರ, ಇವೆಲ್ಲವುಗಳ ಸಂಗವು ಅವಶ್ಯಕ. ಹಾಗಾದರೆ ಮೊಳಕೆಗೆ ಸಂಗವು ಮೂಲ ಕಾರಣ ಎಂದಾಯಿತು. ಅದೂ ಅಲ್ಲದೆ, ಒಂದು ಸಸ್ಯವು ಉದಯವಾಗುವುದಕ್ಕೆ ಮೊದಲು ಮೊಳಕೆ ಬೇಕು, ಅಥವಾ ಸಸ್ಯ ಜೀವದ ಪ್ರಾರಂಭ ಮೊಳಕೆ ಎಂಬುದನ್ನು ಗಮನಿಸಿದರೆ, ಸಸ್ಯ ಜೀವಿಗಳ ಉದಯಕ್ಕೆ ಸಂಗವೇ ಮೂಲ ಎಂದಾಯಿತು. ಮುಂದುವರೆದು ಸಸ್ಯಗಳಲ್ಲಿ ಹೂವಾಗುವದಕ್ಕೂ, ಹೂವಿನಿಂದ ಕಾಯಿ, ಹಣ್ಣು (ಬೀಜ) ಗಳಾಗುವದಕ್ಕೂ ವಿವಿಧ ರೀತಿಯಿಂದ ಪರಾಗ ಸ್ಪರ್ಶ ಕ್ರಿಯೆ, ಅಥವಾ ಸಂಗಕ್ರಿಯೆಯೇ ಕಾರಣವೆಂಬುದನ್ನು ನಾವು ಈಗ ಸಸ್ಯಶಾಸ್ತ್ರ ಪಠ್ಯಗಳಲ್ಲಿ ಓದುತ್ತೇವೆ. ಇದನ್ನೇ ಮಹಾದೇವಿ ಅಕ್ಕನು ಹನ್ನೆರಡನೆ ಶತಮಾನದಲ್ಲಿ ಮೇಲೆ ಬರೆದ ತನ್ನ ವಚನದಲ್ಲಿ ನಿಸ್ಸಂದಿಗ್ಧವಾಗಿ ಹೇಳಿದ್ದಾಳೆ. ಪ್ರಾಣಿ ಶಾಸ್ತ್ರದಲ್ಲಿ ಕೂಡ ಸಸ್ಯಶಾಸ್ತ್ರದಲ್ಲಿರುವಂತೆ, ಜೀವ (ಭ್ರೂಣ)ದ ಉತ್ಪಾದನೆಗೆ ಸಂಗವೇ ಮೂಲ ಕಾರಣವೆಂಬುದನ್ನು ಪ್ರಾಣಿಶಾಸ್ತ್ರ ಪಠ್ಯಗಳಿಂದ ತಿಳಿಯುತ್ತೇವೆ. ಅಂದರೆ ಹೇಳಿದಂತೆ, ಜೀವ (ಸಸ್ಯ ಅಥವಾ ಪ್ರಾಣಿ)ಗಳ ಉದಯದ ಮೂಲ (Origin of life) ವು ಸಂಗವೆಂದಾಯಿತು. ತತ್ವಜ್ಞಾನ (Philosophy) ದಲ್ಲಿಯೂ ಜೀವವಿಜ್ಞಾನದಲ್ಲಿಯೂ ಜೀವದ ಉದಯದ ಮೂಲವು ಬಹು ಮಹತ್ವದ ವಿಷಯ. ಇಂಥ ಮಹತ್ವದ ವಿಷಯಗಳಲ್ಲಿ ನಿಖರವಾದ ಹೇಳಿಕೆಯನ್ನು ನೀಡಿದ ಅಕ್ಕ ಮಹಾದೇವಿಯವರ ವೈಜ್ಞಾನಿಕ ಪ್ರಜ್ಞೆ ನಿಜವಾಗಿಯೂ ಅಚ್ಚರಿಗೊಳಿಸುವಂತಹುದು.

ಸಂಗದ ಕಾರಣದಿಂದ ಹುಟ್ಟುವ ಸಸ್ಯ ಮತ್ತು ಪ್ರಾಣಿ ಮಹತ್ವದ ಜೀವ (ಮಾನವ ಸಹಿತ ಪ್ರಾಣಿ) ರಾಶಿಗಳು, ವಚನದಲ್ಲಿಯ 'ಸರ್ವ ಸುಖದೋರುವದು' ಎಂಬ ಹೇಳಿಕೆಯಂತೆ ಜೀವಿಗಳ ಸುಖಕ್ಕೆ ಕಾರಣವಾಗಿವೆ.

ಧಾರ್ಮಿಕ ತತ್ವವಾದ, ದೇವನ ಅನುಭಾವಿಗಳ ಸಂಗವೇ ಪರಮಸುಖದಾಯಕವಾದುದು ಎಂಬ ತತ್ವವನ್ನು ವ್ಯಕ್ತಪಡಿಸುವ ಸಂದರ್ಭದಲ್ಲಿ, ಉಪಮೆಯಾಗಿ, ಇನ್ನೊಂದು ಮಹತ್ವದ ವೈಜ್ಞಾನಿಕ ತತ್ವವನ್ನೇ ಪ್ರಸ್ತಾಪಿಸಿದ್ದಾರೆ ಅಕ್ಕನವರು. ಇದಕ್ಕೆ ಧಾರ್ಮಿಕ ವಿವೇಚನೆಗೆ ವೈಜ್ಞಾನಿಕ ಸಂಯೋಜನೆ ಎನ್ನಬಹುದಲ್ಲವೇ?

೧. ಸಮಗ್ರ ವಚನ ಸಂಪುಟ ೫, ಕರ್ನಾಟಕ ಸರಕಾರ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ವಚನ ಸಂಖ್ಯೆ ೩೧೨ ಪುಟ ೯೮
೨. ಬಸವರಾಜದೇವರ ವಚನಗಳು : ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ ಪ್ರಕಾಶನ, ವಚನ ಸಂಖ್ಯೆ ೨೨, ಪುಟ ೭







# ರಾಜ್ಯಪಾಲರ ಸೌಜನ್ಯ

ನಮ್ಮ ನಾಡಿನ ಅಪರೂಪದ ನ್ಯಾಯಮೂರ್ತಿಗಳಾಗಿ, ಸಮಾಜ ಸೇವಕರಾಗಿ ಜನಮನದಲ್ಲಿ ನೆಲೆಸಿರುವ ಲಿಂ॥ ನ್ಯಾಯಮೂರ್ತಿ ಡಿ.ಎಂ. ಚಂದ್ರಶೇಖರ್ ಅವರ ಮೌಲಿಕ ಬದುಕಿನ ಸ್ಮರಣೆಗಾಗಿ ನ್ಯಾಯಮೂರ್ತಿ ಡಿ.ಎಂ. ಚಂದ್ರಶೇಖರ್ ಸ್ಮರಣ ಗ್ರಂಥ ಸಮಿತಿ ಪ್ರಕಟಿಸಿರುವ ಮೂರು ಗ್ರಂಥಗಳನ್ನು ಬಿಡುಗಡೆ ಮಾಡುವ ಸಮಾರಂಭ ಬೆಂಗಳೂರಿನ ಶಿವರಾತ್ರೀಶ್ವರ ಕೇಂದ್ರದಲ್ಲಿ ದಿನಾಂಕ ೩೧.೭.೨೦೦೫ರಂದು ನಡೆಯಿತು. ಲಿಂ. ಡಿ.ಎಂ. ಚಂದ್ರಶೇಖರ್ ಅವರ ಘನತೆ ಗೌರವಗಳಿಗೆ, ಜನಾನುರಾಗಕ್ಕೆ ಸಾಕ್ಷಿ ಎಂಬಂತೆ ಅಂದಿನ ಸಭಾಭವನ ಕಿಕ್ಕಿರಿದು ತುಂಬಿತ್ತು.



ಕಿಕ್ಕಿರಿದು ತುಂಬಿದ್ದ ಸಭಾಂಗಣ. ಮೊದಲ ಸಾಲಿನಲ್ಲಿ ಎಡದಿಂದ ಬಲಕ್ಕೆ ಆರನೆಯವರು ಸನ್ಮಾನ್ಯ ರಾಜ್ಯಪಾಲರು

ವಿಶೇಷ ಸಂಗತಿಯೆಂದರೆ ಕಾರ್ಯಕ್ರಮದ ಕರೆಯೋಲೆಗೆ ಮನ್ನಣೆಯಿತ್ತು ಆಗಮಿಸಿದ್ದ ಕರ್ನಾಟಕ ರಾಜ್ಯಪಾಲರಾದ ಘನತೆವೆತ್ತ ಶ್ರೀ ಟಿ.ಎನ್. ಚತುರ್ವೇದಿ ಅವರನ್ನು ವೇದಿಕೆ ಮೇಲಕ್ಕೆ ಆಹ್ವಾನಿಸಿದರೂ, ಎಲ್ಲರಂತೆ ಪ್ರೇಕ್ಷಕರ ಜೊತೆಯಲ್ಲಿ ಕುಳಿತು ಕಾರ್ಯಕ್ರಮದ ಕೊನೆಯವರೆಗೂ ಇದ್ದದ್ದು. ಇದು ಮಾನ್ಯ ರಾಜ್ಯಪಾಲರ ಸೌಜನ್ಯವಷ್ಟೆ ಅಲ್ಲದೆ ಲಿಂ. ನ್ಯಾಯಮೂರ್ತಿ ಡಿ.ಎಂ. ಚಂದ್ರಶೇಖರ್ ಅವರ ಬಗೆಗಿನ ಗೌರವಕ್ಕೂ ಸಾಕ್ಷಿಯಾಗಿತ್ತು.

ಅಂದು ಭಾರತದ ಸರ್ವೋಚ್ಚ ನ್ಯಾಯಾಲಯದ ಹಿರಿಯ ನ್ಯಾಯವಾದಿ ಶ್ರೀ ಎಸ್. ಎಫ್. ನಾರಿಮನ್ ಅವರು ಶ್ರೀ ಕೋ. ಚೆನ್ನಬಸಪ್ಪ ಅವರು ಸಂಪಾದಿಸಿರುವ "In defence of Democracy" ಶ್ರೀ ಗೊ.ರು. ಚನ್ನಬಸಪ್ಪ ಅವರು ಸಂಪಾದಿಸಿರುವ "ದೇಶಮುದ್ರೆ" ಮತ್ತು ಶ್ರೀ ಟಿ.ಆರ್. ಮಹಾದೇವಯ್ಯ ಅವರು ರಚಿಸಿರುವ "ಮಾನವತೆಯ ಮಂದಾರ" ಗ್ರಂಥಗಳನ್ನು ಬಿಡುಗಡೆ ಮಾಡಿದರು. ಶ್ರೀಮತಿ ಉಮಾದೇವಿ ಚಂದ್ರಶೇಖರ್ ಅವರು 'ಸಹನಾ' ಸಂಸ್ಥೆಯ ಐದು ಮಕ್ಕಳಿಗೆ ಶ್ರವಣ ಸಾಧನಗಳನ್ನು ವಿತರಿಸಿದರು.

ಕೇಂದ್ರ ಯೋಜನಾ ರಾಜ್ಯ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್ ಅವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಜಾರ್ಖಂಡ್ ಮತ್ತು ಬಿಹಾರದ ಮಾಜಿ ರಾಜ್ಯಪಾಲರಾದ ನ್ಯಾಯಮೂರ್ತಿ ಶ್ರೀ ಎಂ. ರಾಮಾಜೋಯಿಸ್, ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಹೆಚ್.ಎಸ್. ದೊರೆಸ್ವಾಮಿ ಅವರು ಸ್ಮರಣ ನುಡಿ ಸೇವೆ ಸಲ್ಲಿಸಿದರು.

### ಜ್ಞಾನಪೂರ್ಣ ಜ್ಯೋತಿ!

ಇಗೋ ಈಮನೆ, ಇದೇ ನಮ್ಮನೆ, ಇಲ್ಲಿ ಮೌನವೆ ಉತ್ತರ
ಶಬ್ದದಾಚೆಗೆ ಭಾವದಾಚೆಗೆ ಆದಿ ಮೌನವೆ ಹತ್ತಿರ!
ಜಡದ ಕೊಡಗಳ ಕುಡಿಕೆ ಇಲ್ಲಾ ಇದೇ ಶ್ರೀಗುರು ನಂದನಾ;
ಗಡಿಗಿ ಚಟಿಗಿ ಮಡಿಕಿ ಇಲ್ಲಾ ಸಹಜ ಶ್ರೀ ಸುಖ ಸ್ಪಂದನಾ!

ನೂರು ಬಣ್ಣಾ ಸುಣ್ಣ ಇಲ್ಲಾ ಇಲ್ಲಿ ಎಲ್ಲಾ ಗಮ ಗಮಾ!
ಆತ್ಮಕೋಗಿಲೆ ಜ್ಞಾನಕೂಜನ ಗಾನ ಶಿಖರದ ಸಂಭ್ರಮಾ!
ಹಾರು ಮೇಲಕೆ ಬ್ರಹ್ಮತತ್ತ್ವಕೆ ಸಾಕು ಡವಗಿಯ ಧಮಧಮಾ
ಜ್ಞಾನಪೂರ್ಣ ಜ್ಯೋತಿ ಅರಳಲಿ ಜೀವ ಜಂಗಮ ಸಂಗಮಾ!

-ಪ್ರೊ. ಜಿ.ಹೆಚ್. ಹನ್ನೆರಡುಮಠ



# ದೇವರು ಬಯಸುವುದು ಏನನ್ನು?

-ರಂಜಾನ್ ದರ್ಗಾ, ಗುಲ್ಬರ್ಗ

"ತುಳಿತಕ್ಕೀಡಾದವರು ಜಗತ್ತಿನ ನಾಯಕರು ಮತ್ತು ನೇರ ವಾರಸುದಾರರು ಆಗಬೇಕೆಂದು ನಾವು ಬಯಸಿದ್ದೇವೆ" ಎಂದು ಪವಿತ್ರ ಕುರಾನ್‌ನ ೨೮ನೇ ಅಧ್ಯಾಯದ ೫ನೇ ಸೂತ್ರದಲ್ಲಿ ಹೇಳಲಾಗಿದೆ. ೧೪ ಶತಮಾನಗಳಷ್ಟು ಹಿಂದಿನ ಆಶಯ ಇದು.

ತುಳಿತಕ್ಕೀಡಾದವರು ಈ ಜಗತ್ತನ್ನು ಆಳುವವರೆಗೆ ಅಶಾಂತಿಯ ಮೋಡಗಳು ಕವಿಯುತ್ತಲೇ ಇರುತ್ತವೆ. ಹತಾಶೆಯ ಬದುಕು ಮತ್ತು ಅಹಂಕಾರದ ಬದುಕು ಒಂದೇ ಸಮಾಜದಲ್ಲಿ ಅಸ್ತಿತ್ವದಲ್ಲಿರುತ್ತವೆ. ಐಹಿಕ ದುರಾಸೆಗಳನ್ನು ಮೀರಿದ ಸಮಾನತೆಯ ವಾತಾವರಣದಲ್ಲಿ ಮಾತ್ರ ಅಧ್ಯಾತ್ಮದ ಹೂಗಳು ಸಂಪೂರ್ಣವಾಗಿ ಅರಳುವವು ಎಂಬ ಸತ್ಯವನ್ನು ಎಲ್ಲ ಮಹಾತ್ಮರು ಅರಿತಿದ್ದರು. ಈ ಕಾರಣದಿಂದಲೇ ೨೫ ಶತಮಾನಗಳ ಹಿಂದೆ ಬುದ್ಧ ರಾಜ್ಯ ತ್ಯಾಗ ಮಾಡಿದ. ಕಡುಬಡವರ ಬದುಕನ್ನು ಆಯ್ಕೆ ಮಾಡಿಕೊಂಡು ಅವರಲ್ಲಿ ಒಂದಾಗಿ ಅಮರನಾದ. "ಸೂಜಿಯ ಕಣ್ಣಿನಿಂದ ಒಂಟೆ ಪಾರಾಗಬಹುದು, ಆದರೆ ಐಶ್ವರ್ಯವಂತರು ಸ್ವರ್ಗಕ್ಕೆ ಹೋಗಲಿಕ್ಕಾಗದು" ಎಂದು ಏಸು ಕ್ರಿಸ್ತ ೨೦ ಶತಮಾನಗಳ ಹಿಂದೆಯೆ ಬಡವರ ಪರವಾಗಿ ನಿಂತ. "ನನ್ನನ್ನು ಬಲಹೀನರ ಮತ್ತು ಬಡವರ ಮಧ್ಯೆ ಹುಡುಕಿರಿ. ನಿಶ್ಚಯವಾಗಿಯೂ ನೀವು ಅವರ ದುಡಿಮೆಯಿಂದಲೇ ಆಹಾರವನ್ನು ಸಹಾಯವನ್ನು ಪಡೆಯುತ್ತೀರಿ" ಎಂದು ಪೈಗಂಬರರು ೧೪ ಶತಮಾನಗಳ ಹಿಂದೆ ತಮ್ಮನ್ನು ಬಡವರ ಜೊತೆ ಗುರುತಿಸಿಕೊಂಡರು.

ಬಸವಣ್ಣನವರ ಕೂಡಲ ಸಂಗಮದೇವ ಕೂಡ ಬಡವರ ಪರವಾಗಿಯೇ ಇದ್ದಾನೆ. "ವೇದ ನಡನಡುಗಿತ್ತು. ಶಾಸ್ತ್ರವಗಲಿ ಕೆಲಕ್ಕೆ ಸಾರಿದ್ದಿತ್ತಯ್ಯಾ ..... ನಮ್ಮ ಕೂಡಲ ಸಂಗಯ್ಯನು ಮಾದಾರ ಚೆನ್ನಯ್ಯನ ಮನೆಯಲ್ಲುಂಡ ಕಾರಣ" ಎಂದು ಬಸವಣ್ಣವರು ಹೇಳಿದ್ದಾರೆ. ಬಸವಣ್ಣನವರು ಆ ಕಾಲದ ಉನ್ನತ ಕುಲ, ಉನ್ನತ ವರ್ಗ, ಉನ್ನತ ವಿದ್ಯೆ, ಉನ್ನತ ಹುದ್ದೆಯಿಂದ ದೂರ ಸರಿದು ಬಸವಳಿದ ಮನುಷ್ಯನ ಪಕ್ಕದಲ್ಲಿ ನಿಂತು "ನಾನೇನು ಮಾಡಲಿ ಬಡವನಯ್ಯ" ಎಂದು ಹೇಳಿದವರು.

"ಶೂದ್ರರು (ದುಡಿಯುವ ಜನರು) ಈ ಜಗತ್ತನ್ನು ಆಳಬೇಕು" ಎಂದು ಸ್ವಾಮಿ ವಿವೇಕ.ನಂದ ಅವರು ಸಾರಿದ್ದಾರೆ. ಮಹಾತ್ಮಾ ಗಾಂಧೀಜಿಯವರು ಕೊನೆಯವರೆಗೂ ಕಟ್ಟ ಕಡೆಯ ಮನುಷ್ಯನ ಹಾಗೆಯೇ ಬದುಕಿದರು. ಅಜ್ಞೇಯವಾದಿ ಬುದ್ಧದೇವನನ್ನು ಬಿಟ್ಟರೆ ಇವರೆಲ್ಲ ದೇವರ ಮೇಲೆ ಅಪರಿಮಿತವಾದ ಶ್ರದ್ಧೆಯನ್ನು ಇಟ್ಟವರು. ದೇವರ ಬಯಕೆಗೆ ತಕ್ಕಂತೆ ಐಹಿಕ ದುರಾಸೆಗಳಿಂದ ದೂರವಿದ್ದು ಬಡವರೊಡನೆ ಬದುಕಿದವರು. ನಾವೆಲ್ಲ ಬಡವರ ಪರವಾಗಿ ನಿಂತರೆ ಸುಲಿಗೆಯ ವ್ಯವಸ್ಥೆ ಹೋಗಿ ಮಾನವೀಯ ವ್ಯವಸ್ಥೆ ಬರುವುದರಲ್ಲಿ ಸಂಶಯವಿಲ್ಲ.

## ಅಕ್ಕಮಹಾದೇವಿ

ಹುಟ್ಟು ನಿರ್ವಾಣಕ್ಕೆ
ಬಟ್ಟೆಗಳು ಏಕೆಂದು
ಕಟ್ಟು ಕಟ್ಟಳೆಯ ಕಿತ್ತಿಟ್ಟರೂ ಎನ್ನಕ್ಕ
ಕೆಟ್ಟ ಕಣ್ಗಳ
ನೆಟ್ಟ ದೃಷ್ಟಿಗೆ ರಟ್ಟಾಗದಂತೆ
ದಟ್ಟ ಕೇಶವ ಬಿಚ್ಚಿ
ಮುಚ್ಚಿದಳು ತನುವ,
ದಿಟ್ಟ ಶಿವಶರಣೆಯಾಗಿ ಶಿವಗೆ
ಬಿಚ್ಚಿದಳು ಮನವ, ತೇಜ ನಿನದ !

ಶರಣ ತೇಜದ ಬೀಜೋದ್ಭವೆ ನೀನು ।
ಕಲ್ಯಾಣ ಕೇದಿಗೆಯ ನಾಗರ ನೀನು ।
ಜ್ಞಾನಾಂಬುಧಿಯ ಜಾಗರ ನೀನು ।
ಶಿವಶರಣರಿಗೆಲ್ಲ ಅಕ್ಕ ನೀನು, ತೇಜ ನಿನದ !

ಭ್ರಮೆಯ ಮಡುವ ಎಡತಾಕಲಿಲ್ಲವಳು,
ಸುಡುವ ಬಡಬಾಗ್ನಿಯೆಂದರಿತವಳು.
ಐದು ಸುತ್ತಿನ ಕತ್ತಲೆಯ ಕೋಟೆಯೊಳು
ಬೆತ್ತಲೆಯ ಮುಕ್ತಿ ದೀವಿಗೆಯ ಉರಿಸಿದವಳು.
ಕಾಮುಕನೊಡನೆ ನಡೆದ ಕಲ್ಯಾಣವ
ಧಿಕ್ಕರಿಸಿ ದಿಗಂಬರಿಯಾದಳು ಅಕ್ಕ
ಕಲ್ಯಾಣ ಹೊಕ್ಕು ಅಣ್ಣಗಳ ನೆಳಲಲ್ಲಿ
ಸೌಖ್ಯದೊಳಿದ್ದಳು ಅಕ್ಕ.
ಕರೆಬರಲು ಕದಳಿಯ ಪೊಕ್ಕು
ಐಕ್ಯವಾದಳು ಅಕ್ಕ, ತೇಜ ನಿನದ !

-ಬಿ.ಎನ್. ತೇಜಸ್ವಿನಿದೇವಿ ಅರಸ್





# ABUSE OF LINGA IN THE NORTH AND IN THE WEST

-A.C. Shivalingappa
B.T.M. Layout, Bangalore

The word LINGA or LINGAM, the worshipping deity of God SIVA being worshipped by Veerasaiva Lingayat Community People of the world has been abusively and mischievously defined as the PHALLUS symbol (male organ) of God SIVA in (1) Aryans Rig-Veda, (2) The School Dictionary of T.A. Swaminatha Iyer, the Editor of the "ARYA" in 1962 (3) Encyclopaedia Britanica 1994, (4) Chamber Dictionary of Allied Publishers Limited 1972, (5) The OXFORD Dictionary of English 1989, (6) New OXFORD Dictionary 1998, (7) Collins English Dictionary 1994, (8) The American Heritage College Dictionary 1993, (9) The Random House Dictionary 1987 and by some others.

Most of the above mentioned publishers have made this abusive Definition of Linga as Late as in 1960's, but it is not found in their earlier editions. When asked about it, there is no satisfactory answer from them till now.

The publisher of Encyclopaedia Britanica has committed another blunder in addition to his abuse of Linga as stated hereunder:-

He has printed in his 1994 edition "A Figure engraved on a small sand stone plaque which is exhibited in British Museum as purporting it to be "Linga".

But is shocking to note that there is no inscription of the word "Linga" engraved on it by person who had carved out the figure on the plaque. Instead, the publisher has printed his own version in English at the bottom of the figure saying it as "Sand Stone Linga" thereby misleading the innocent readers.

The said figure is having a human form with four arms two on the left and two on the right, worn in ornamental costume, a pinnacle as the headgear and most importantly holding a "SANKU" in the left upper arm, and a "CHAKARA" in the right upper arm, and a blessing posture of the right lower arm, resembling the worshipping Deity God "VISHNU". It is more reasonable that the people of Harappan region might have been worshipping such Deities in their houses since there were no builtup temples for worship in those days.

It is pity that the guilty conscious publisher had concentrated his mind on observing the shape of the sand stone plaque ignoring to study the reality and importance of the figure engraved on it.

Therefore it is quite that the figure on the sand stone is not at all a "LINGA" but it is the worshipping Deity of God "VISHNU" by the people of Harappan region on those Days.

The above said Definition of Linga by the publishers is utter false, baseless, without any valid proof and Defamatory, Thereby, wounding the feelings of the entire Veerasaiva Lingayat Community people of the world infringing the fundamental religious rights of the citizens guaranteed under the Article 25 and 26 of the Indian Constitution and it is also an insult and Defame being caused not only to our religion but also to our worshipping Deity "LINGA".

God SIVA has no form, to say that He is in a formless form of Linga. Ishtalinga by name is also formed as the Godhead to the worshipper to concentrate his mind in God "SIVA" During his worship.

LINGA worship having been proved to the Pre-Vedic and prevalent during the times of Ramayana and Mahabharata.

I deepely studied about it and finally came to a conclusion that taking of legal action thro' Court of Law against the publishers is the only solution to stop further publication of such abusive definitions in their Dictionaries.

In fact I already took some steps in this matter, but I could not proceed further due to my ill health at that time.

Therefore, I hereby call upon all the Verasavia Lingayats those who have sincere faith in "LINGA WORSHIP" to take immediate action against the publishers to wipe out of the Abuse caused to the worshipping Deity LINGA OR LINGAM and also request you all to suspend worshipping your abused LINGA till you get relief in this matter. ○

ಬಳ್ಳಾರಿ ಜಿಲ್ಲೆ

## ತಾರ್ಕಿಕ ವ್ಯಕ್ತಿ – ಅಂಬಿಗರ ಚೌಡಯ್ಯ

"ಅಂಬಿಗರ ಚೌಡಯ್ಯ ಒಬ್ಬ ತಾರ್ಕಿಕ ವ್ಯಕ್ತಿಯಾಗಿದ್ದ. ಸಾಮಾಜಿಕ ಪ್ರಜ್ಞೆಗಿಂತ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡಿದ. ಆಧ್ಯಾತ್ಮಕ್ಕಿಂತ ಕ್ರಿಯಾಶೀಲ ಬದುಕಿಗೆ ಮಹತ್ವ ಕೊಟ್ಟ. ತನ್ನ ಹೆಸರನ್ನೇ ಅಂಕಿತವಾಗಿಟ್ಟುಕೊಂಡ ಈತ, ಗಿಡ ಗಂಟೆಗಳು ದೇವರಲ್ಲ, ಮೀನು–ಮಂಡೂಕ ದೇವರಲ್ಲ ಎಂಬ ಸಾಲುಗಳಲ್ಲಿ ದೇವರ ಅಸ್ತಿತ್ವವನ್ನು ಪ್ರಶ್ನಿಸುತ್ತಾನೆ. ದೇವರನ್ನು ಕಾಣುವಲ್ಲಿ ದೇಹ ದಂಡನೆ ಸರಿಯಲ್ಲವೆಂದು ಆತ ತಿಳಿಸುತ್ತಾನೆ" ಎಂದು ಕನ್ನಡ ವಿ.ವಿ. ಹಸ್ತಪ್ರತಿ ವಿಭಾಗದ ಪ್ರಾಧ್ಯಾಪಕ ಡಾ॥ ಕೆ. ರವೀಂದ್ರನಾಥ ಅಭಿಪ್ರಾಯಪಟ್ಟರು. ಅವರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಹೊಸಪೇಟೆ ತಾಲ್ಲೂಕು ಘಟಕವು ಟಿ.ಬಿ.ಡ್ಯಾಂ ರಸ್ತೆಯಲ್ಲಿರುವ ಗಂಗಾಮತ ಸಮುದಾಯ ಭವನದಲ್ಲಿ ಆಯೋಜಿಸಿದ್ದ ೫೧ನೇ ಮಹಾಮನೆ ಕಾರ್ಯಕ್ರಮದಲ್ಲಿ ಉಪನ್ಯಾಸ ನೀಡಿ ಮಾತನಾಡಿದರು.

ಅತಿಥಿಯಾಗಿ ಆಗಮಿಸಿದ್ದ ಡಾ. ಕೆ.ಎಂ. ಮೈತ್ರಿ ಅವರು "ಶರಣ ಸಂದೇಶವನ್ನು ಬಡ ಹಾಗೂ ದೀನ ದಲಿತರಿಗೆ ತಲುಪಿಸಬೇಕಾದ ಅನಿವಾರ್ಯತೆ ಇದೆ. ಇಂದಿನ ಮಠ ಮಾನ್ಯರು ಕೊಳಚೆ ಪ್ರದೇಶ (ಸ್ಲಂ)ಗಳಿಗೇ ಹೋಗದೆ ಮಡಿವಂತಿಕೆಯನ್ನು ಅನುಸರಿಸುತ್ತಿದ್ದಾರೆ. ಬಡವರನ್ನು 'ಬಾರೋ' ಎಂದು ಕರೆಯುವ ಈ ಸಮಾಜ ಶರಣರನ್ನು ಬೀದಿಗೆ ನಿಲ್ಲಿಸಿದೆ" ಎಂದು ನೊಂದು ನುಡಿದರು.

"ಈ ದೇಶದಲ್ಲಿ ದರಿದ್ರರು ಎಂದು ಕರೆಯಿಸಿಕೊಳ್ಳುವವರೇ ನಿಜಕ್ಕೂ ದೇವರು ಎಂದು ಹೇಳಿದ ಸ್ವಾಮಿ ವಿವೇಕಾನಂದರನ್ನೇ ದೇವರಾಗಿಸಿದ್ದೇವೆ. ಹಾಗೆ ನೋಡಿದರೆ ದೇವರು ಅಥವಾ ದೆವ್ವಗಳು ನಾಲ್ಕು ಗೋಡೆಗಳ ಮಧ್ಯದಲ್ಲಿ ಇಲ್ಲ. ನಮ್ಮ ಮನಸ್ಸಿನೊಳಗೇ ಇವೆ" ಎಂದು ಡಾ. ಮೈತ್ರಿ ಅಭಿಪ್ರಾಯಪಟ್ಟರು.

ಅಧ್ಯಕ್ಷತೆ ವಹಿಸಿದ್ದ ಪ್ರೊ. ವಿಜಯಕುಮಾರ ವೈದ್ಯ "ಹತ್ತಿಯನ್ನು ಹಿಂಜಿದಾಗ ನೂಲು ರೂಪುಗೊಳ್ಳುತ್ತದೆ. ಇಂತಹ ಕಾರ್ಯಕ್ರಮಗಳಲ್ಲಿ ವಿಷಯ ಚರ್ಚೆಗಳಿಗೆ ಒಳಗಾದಾಗ ಹೊಸ ವಿಚಾರಗಳು ಹೊರ ಹೊಮ್ಮುತ್ತವೆ. ಚೌಡಯ್ಯ ದೇವರನ್ನು ಗುಡಿಯಲ್ಲಿ ಕಾಣುವ ಬದಲು, ದುಡಿಯುವ ವರ್ಗದಲ್ಲಿ ಕಂಡ" ಎಂದರು. ಕಾರ್ಯಕ್ರಮದ ಆರಂಭದಲ್ಲಿ ಉಪನ್ಯಾಸಕಿ ನಾಗಪುಷ್ಪಲತಾ ಚಲುವರಾಜು ಇವರು ವಚನಗಳನ್ನು ಹಾಡಿದರು. ಗಂಗಾಮತ ಸಮಾಜದ ಪದಾಧಿಕಾರಿಗಳಿಂದ ಮಾಲಾರ್ಪಣೆ ಕಾರ್ಯಕ್ರಮ ನೆರವೇರಿತು. ಪ್ರೊ. ಯು. ರಾಘವೇಂದ್ರ ರಾವ್ ಸ್ವಾಗತಿಸಿದರು. ಹೆಚ್. ಸಿದ್ದಪ್ಪ ನಿರೂಪಿಸಿದರು.


ವೇದಿಕೆಯಲ್ಲಿ : ಡಾ. ಕೆ. ರವೀಂದ್ರನಾಥ (ಎಡದಿಂದ) ಗಂಗಾಮತ ಸಮಾಜದ ಎಂ. ಮಲಿಯಪ್ಪ, ಗಣಿ ಮಾಲಿಕ ಏಳುಬೆಂಚಿ ಸಿದ್ಧನಗೌಡ, ಪ್ರೊ. ವಿಜಯಕುಮಾರ ವೈದ್ಯ, ಮೈಸೂರು ರಾಮಕೃಷ್ಣಾಶ್ರಮದ ವೀರೇಶಾನಂದಜಿ, ಡಾ. ಕೆ.ಎಂ. ಮೈತ್ರಿ ಹಾಗು ನಾಗಪುಷ್ಪಲತಾ ಚೆಲುವರಾಜ

ಈ ವಿಶೇಷ ಕಾರ್ಯಕ್ರಮವನ್ನು ಗಣಿಮಾಲೀಕ ಏಳುಬೆಂಚಿ ಸಿದ್ಧನಗೌಡ ಹಾಗೂ ಗಂಗಾಮತ ಸಮಾಜದ ಮುಖಂಡ ಎಂ. ಮಲಿಯಪ್ಪ ನೆರವೇರಿಸಿಕೊಟ್ಟರು. ಮೈಸೂರಿನ ಸ್ವಾಮಿ ವೀರೇಶಾನಂದಜಿ ಸಾನ್ನಿಧ್ಯವಹಿಸಿ, ಹಿತನುಡಿಗಳನ್ನು ಆಡಿದರು. ಕೊನೆಯಲ್ಲಿ ಪರಿಷತ್ತಿನ ಅಧ್ಯಕ್ಷ ಜಿ. ಬಸಪ್ಪ ವಂದಿಸಿದರು.

ವರದಿ : ಜಂಬುನಾಥ ಹೆಚ್.ಎಂ.

### ತುಮಕೂರಿನಲ್ಲಿ
### (ಲಿಂ.) ಹ.ಬ. ಮಹದೇವಪ್ಪ ಅವರಿಗೆ ಶ್ರದ್ಧಾಂಜಲಿ


ಡಾ॥ ಶ್ರೀ ಶ್ರೀ ಶಿವಾನಂದಶಿವಾಚಾರ್ಯ ಸ್ವಾಮೀಜಿ ಅವರ ಸಾನ್ನಿದ್ಯ, ಹೆಚ್.ವಿ. ವೀರಭದ್ರಯ್ಯ ಅಧ್ಯಕ್ಷತೆ ಬೆಂಗಳೂರಿನ ಪೋಲಿಸ್ ಉಪ ಅಧೀಕ್ಷಕರಾದ ಎಂ. ಗಂಗಾಧರ್ ರವರಿಂದ ಉಪನ್ಯಾಸ





ಗದಗ ಜಿಲ್ಲೆ

## ೭೫ನೆಯ ವಚನೋತ್ಸವ

ಶಿರಹಟ್ಟಿ ತಾಲ್ಲೂಕು ಕದಳಿ ಮಹಿಳಾ ವೇದಿಕೆಯವರು ಪ್ರತಿ ಶನಿವಾರ ಮನೆ–ಮನೆಗಳಲ್ಲಿ ನಡೆಸುತ್ತಿರುವ ವಚನೋತ್ಸವದ ಅಂಗವಾಗಿ ಜುಲೈ ೧೬ರಂದು ೭೫ನೆಯ ಕಾರ್ಯಕ್ರಮವನ್ನು ಶ್ರೀ ಉಳವಿ ಕ್ಷೇತ್ರದಲ್ಲಿ ನಡೆಸಲಾಯಿತು.

ಕದಳಿ ವೇದಿಕೆಯ ಅಧ್ಯಕ್ಷಿಣಿಯರಾದ ಪ್ರೇಮಕ್ಕ ಬಿಂಕದಕಟ್ಟಿಯವರ ಸಂಘಟನೆಯಲ್ಲಿ ೪೮ ಜನ ಶರಣೆಯರು, ೮ ಜನ ಶರಣರು ಈ ಕಾರ್ಯಕ್ರಮದಲ್ಲಿ ಪಾಲುಗೊಂಡಿದ್ದರು.



ಉಳವಿ ಕ್ಷೇತ್ರ ಪ್ರವಾಸದಲ್ಲಿ ಎ.ಆರ್. ಮಾಗಳದ, ವ್ಹಿ.ಜಿ. ಭಿಕ್ಷಾವೃತ್ತಿಮಠ, ಕೆ.ಎಸ್. ಕೊಡ್ಲಿವಾಡ, ಆರ್.ಆರ್. ಪಾಟೀಲ, ಅಜ್ಜಣ್ಣ, ಎಸ್.ಎಸ್. ಫಕೀರಸ್ವಾಮಿಮಠ, ಸಂಗಮೇಶ ನವಲಗುಂದ ಮುಂತಾದ ಶರಣರು ಮತ್ತು ಶಾರಕ್ಕ ಗಾಂಜಿ, ಕಾಂಚನಮಾಲಾ, ಕಸ್ತೂರೆಮ್ಮ, ಸರೋಜಮ್ಮ, ಗಂಗಮ್ಮ, ನೀಲಾ ಬೂದಿಹಾಳ, ಲತಾಪಾಟೀಲ, ಸಾವಿತ್ರಮ್ಮ ಸಭಾವಾಡಿಮಠ, ಲಲಿತಾ, ಪ್ರತಿಮಾ, ಶಕುಂತಲಾ ಮುಂಜಿ, ಶಕುಂತಲಾ ಅಳಗವಾಡಿ, ಅರುಂಧತಿ ರಾಜೇಶ್ವರಿ, ಶಕುಂತಲಾತಟ್ಟಿ, ಕುಸುಮಾ ಸೋಮಕ್ಕನವರ, ದೇವಕ್ಕ, ದಾನಕ್ಕ, ಈರೂಬಾಯಿ ಕೊಟಗಿ, ಪಾರ್ವತೆಮ್ಮ, ರೇಣುಕಾ ಯಲವಿಗಿ, ಸುಶೀಲಾ ಅಗಸನಳ್ಳಿ, ಪಾರ್ವತಿ, ಶಾರದಾ, ಜಯಶ್ರೀ, ಸಂಪದಾ, ಚೈತ್ರಾ ಮುಂತಾದ ಶರಣೆಯರು ಪಾಲ್ಗೊಂಡಿದ್ದರು.

ವರದಿ : ಪ್ರೇಮಕ್ಕ ಬಿಂಕದಕಟ್ಟಿ

ಗುಲ್ಬರ್ಗ ಜಿಲ್ಲೆ

## ಯುವಜನಕ್ಕೆ ಶರಣ ಸಂದೇಶ

ಗುಲ್ಬರ್ಗಾ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು 'ಯುವಜನರಿಗಾಗಿ ಶರಣ ಸಂದೇಶ' ಎಂಬ ವಿಶೇಷ ಕಾರ್ಯಕ್ರಮವನ್ನು ಹಮ್ಮಿಕೊಂಡು ದಿನಾಂಕ ೭.೮.೨೦೦೫ ರಿಂದ ೩.೯.೨೦೦೫ರವರೆಗೆ ಕಲಬುರ್ಗಿಯ ೨೧ ಶಿಕ್ಷಣ ಸಂಸ್ಥೆಗಳಲ್ಲಿ ತಜ್ಞರಿಂದ ಶರಣರ ವಿಚಾರಧಾರೆಯನ್ನು ಕುರಿತಂತೆ ವಿಶೇಷೋಪನ್ಯಾಸಗಳನ್ನು ನಡೆಸಿದೆ. ಆಯಾ ಶಿಕ್ಷಣ ಸಂಸ್ಥೆಗಳಲ್ಲಿ ನಡೆಯುವ ಉಪನ್ಯಾಸ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಆಯಾ ಸಂಸ್ಥೆಗಳ ಮುಖ್ಯಸ್ಥರೇ ವಹಿಸಿಕೊಂಡಿದ್ದಾರೆ.

ಯುವಜನರಿಗೆ ಹನ್ನೆರಡನೆಯ ಶತಮಾನದ ಕ್ರಾಂತಿಯ ಸಂದೇಶವನ್ನು ಮುಟ್ಟಿಸುವ ದಿಸೆಯಲ್ಲಿ ಇದೊಂದು ಅಪೂರ್ವ ದಾಖಲೆಯ ಕಾರ್ಯಕ್ರಮವಾಗಿದೆ. ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಈ ಕಾರ್ಯಕ್ರಮ ನಿರ್ವಹಣೆಯಲ್ಲಿ ಕಲ್ಯಾಣ (ಹೈದ್ರಾಬಾದ್) ಕರ್ನಾಟಕ ಕನ್ನಡ ಸಾಹಿತ್ಯ ಮಂಟಪದವರು ಜೊತೆಗೂಡಿದ್ದಾರೆ.

ಈ ವಿಶೇಷೋಪನ್ಯಾಸ ಮಾಲೆಯನ್ನು ಬೀದರ ಜಿಲ್ಲಾ ಕೌಂಟಾ ಬಸವಯೋಗಾಶ್ರಮದ ಪೂಜ್ಯ ಶ್ರೀ ಸಿದ್ಧರಾಮ ಶರಣರು ಬೆಲ್ದಾಳ ಅವರು ಮತ್ತು ಕಲಬುರ್ಗಿಯ ಬಸವ ಮಂಟಪದ ಪೂಜ್ಯ ಅಕ್ಕಮಹಾದೇವಿ ಅವರ ಸಾನ್ನಿಧ್ಯದಲ್ಲಿ ಉದ್ಘಾಟಿಸಲಾಯಿತು.

ಚಿತ್ರದುರ್ಗ ಬೃಹನ್ಮಠದ ಪೂಜ್ಯ ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಮಹಾಸ್ವಾಮಿಗಳ ಸಾನ್ನಿಧ್ಯದಲ್ಲಿ ನಡೆಯುವ ಮುಕ್ತಾಯ ಸಮಾರಂಭದಲ್ಲಿ ಬಸವ ಸಮಿತಿ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿ ಅವರು ಮುಖ್ಯ ಅತಿಥಿಗಳಾಗಿರುತ್ತಾರೆ.

ವರದಿ : ಪ್ರೊ. ಕುಪೇಂದ್ರ ಪಾಟೀಲ

### ಸಿರಿಗನ್ನಡ

ಕಟ್ಟುವೆವು ಕನ್ನಡ ಕವನ,
ಮುಡಿಯುವೆವು ಮಲ್ಲಿಗೆ, ದವನ.
ನುಡಿಯುವೆವು ಚೆಲುವ ಕನ್ನಡ
ನೋಡಿ ನಲಿಯುವೆವು ಸಿರಿಗನ್ನಡ !

–ನಾ.ಮ. ಬಸವರಾಜಯ್ಯ

**ಚಿಕ್ಕಮಗಳೂರು ಜಿಲ್ಲೆ**

## ಶ್ರಾವಣ ಸಂಜೆ – ಶರಣ ಸಂದೇಶ

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಕಡೂರು ತಾಲ್ಲೂಕು ಘಟಕ, ತಾಲ್ಲೂಕು ವೀರಶೈವ ಸಮಾಜ ಮತ್ತು ಯುವ ವೇದಿಕೆ ಹಾಗೂ ಕಸಬಾ ಹೋಬಳಿ ಕನ್ನಡ ಸಾಹಿತ್ಯ ಪರಿಷತ್ತು, ಕಡೂರು ಇವರ ಸಂಯುಕ್ತಾಶ್ರಯದಲ್ಲಿ ಕಡೂರಿನ ಶ್ರೀ ಯಳನಡು ಮಠದಲ್ಲಿ ಒಂದು ತಿಂಗಳ ಈ ಸಲದ 'ಶ್ರಾವಣ ಸಂಜೆ ಶರಣ ಸಂದೇಶ' ಕಾರ್ಯಕ್ರಮವನ್ನು ಭಕ್ತರ ಉದಾರ ನೆರವಿನಿಂದ ಶ್ರೀಮಠದ ಪೂಜ್ಯ ಶ್ರೀ ಜ್ಞಾನಪ್ರಭು ಸಿದ್ಧರಾಮ ದೇಶಿಕೇಂದ್ರ ಸ್ವಾಮಿಗಳು ವ್ಯವಸ್ಥೆ ಮಾಡಿದ್ದಾರೆ.

ದಿನಾಂಕ ೫.೮.೨೦೦೫ರಂದು ಸ್ವಾಮೀಜಿಯವರ ಸಾನ್ನಿಧ್ಯದಲ್ಲಿ ಕಡೂರು ತಾಲ್ಲೂಕು ತಹಸೀಲ್ದಾರ್ ಡಾ॥ ಲಕ್ಷ್ಮೀನಾರಾಯಣಪ್ಪ ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಾ "ಶ್ರಾವಣ ಮಾಸ ಶ್ರವಣ ಮಾಸವೂ ಹೌದು. ಶರಣರ ಸಂದೇಶ, ದಾಸರ ಕೀರ್ತನೆಗಳು, ವಿದ್ವಾಂಸರ ಉಪನ್ಯಾಸ ಮುಂತಾದವು ಜನಮನವನ್ನು ತಿದ್ದಲು ನಡೆಯುತ್ತಿರುವುದು ಸ್ತುತ್ಯವಾದುದು" ಎಂದು ತಿಳಿಸಿದರು. ಡಾ. ವೈ.ಸಿ. ವಿಶ್ವನಾಥ್ ಅಧ್ಯಕ್ಷತೆ ವಹಿಸಿದ್ದರು.

ತಾಲ್ಲೂಕು ಶರಣ ಸಾಹಿತ್ಯ ಪರಿಷತ್ ಕಾರ್ಯದರ್ಶಿ ಜಿ.ಸಿ. ಸಿದ್ಧಪ್ಪ ಪ್ರಾಸ್ತಾವಿಕ ಮಾತುಗಳ ಜೊತೆಗೆ 'ಅದೇತರ ನುಡಿ? ಮಾತಿನ ಮರೆ!' ವಿಷಯ ಕುರಿತು ಉಪನ್ಯಾಸ ನೀಡಿದರು.

ಪ್ರಾರಂಭದಲ್ಲಿ ಪರಮೇಶ್ವರಪ್ಪನವರಿಂದ ಪ್ರಾರ್ಥನೆ ಮತ್ತು ಕೆ.ಎಸ್. ಶಂಭೇಗೌಡರಿಂದ ಸ್ವಾಗತ ನಡೆಯಿತು. ಕೊನೆಯಲ್ಲಿ ಶಿವಮೂರ್ತಿ ವಂದಿಸಿದರು. ಶೇಖರಪ್ಪ ಕಾರ್ಯಕ್ರಮ ನಿರೂಪಿಸಿದರು.

ವರದಿ : ಜಿ.ಸಿ. ಸಿದ್ಧಪ್ಪ

**ಶರಣ ಸಾಹಿತ್ಯ**

ಶರಣರ ಸಾಹಿತ್ಯ ಚಿರಂತನ ಚಿಂತನ
ಅರುಹಿನ ಕುರುಹಿಗಾಗಿ ಮಂಥನ
ಬೇರಾವ ಸಾಹಿತ್ಯದೊಳಗಿಲ್ಲ ಆನಂದ
ತೆರದಿಟ್ಟ ಪುಸ್ತಕದಂತೆ ಭವ್ಯಾನಂದ !

–ನಾ.ಮ. ಬಸವರಾಜಯ್ಯ

**ಮೈಸೂರು ಜಿಲ್ಲೆ**

## ವಿಶೇಷೋಪನ್ಯಾಸ ಮತ್ತು ಸಂವಾದ

ಮೈಸೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ದಿ. ೪.೮.೦೫ರಂದು ಸ್ಥಳೀಯ ಶಿವದೇವಾಲಯ ಮತ್ತು ಪರಂಜ್ಯೋತಿ ಮಹಿಳಾ ಬಳಗದ ಸಹಯೋಗದಲ್ಲಿ ಏರ್ಪಡಿಸಿದ ಕಾರ್ಯಕ್ರಮದಲ್ಲಿ ಶ್ರೀಮತಿ ಶಾಂತಾ ಜಗದೀಶ್ ಅವರು ವಚನ ಸಾಹಿತ್ಯ ಕುರಿತು ವಿಶೇಷೋಪನ್ಯಾಸ ನೀಡಿ ವಚನ ಗಾಯನವನ್ನು ನಡೆಸಿದರು.

ಶಿವದೇವಾಲಯ ಸಮಿತಿ ಅಧ್ಯಕ್ಷರಾದ ಶ್ರೀ ಗುರುಪ್ರಸಾದ್ ಅವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಜಿಲ್ಲಾ ಘಟಕದ ಅಧ್ಯಕ್ಷರಾದ ಡಾ. ಎಸ್. ಶಿವರಾಜಪ್ಪ ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಸೌಹಾರ್ದಯುತ ಬದುಕಿನ ಮಹತ್ವವನ್ನು ತಿಳಿಸಿದರು.

ಕಾರ್ಯಕ್ರಮದಲ್ಲಿ ಶ್ರೀಮತಿ ಪಾರ್ವತಿ ಶಂಕರ್, ಮಂಗಳಾ ಮುದ್ದು ಮಾದಪ್ಪ ಮತ್ತು ಡಾ. ಕೆ.ಎನ್. ಸುಬ್ಬರಾಯಪ್ಪ ಉಪಸ್ಥಿತರಿದ್ದರು. ಪರಂಜ್ಯೋತಿ ಮಹಿಳಾ ಬಳಗದವರಿಂದ ಪ್ರಾರ್ಥನೆ ನಡೆಯಿತು. ಕಾರ್ಯದರ್ಶಿ ಶ್ರೀ ಎಸ್. ನಂಜುಂಡಪ್ಪ ಅವರು ಸ್ವಾಗತಿಸಿದರು. ಶ್ರೀ ಎನ್. ಬಸವರಾಜಪ್ಪ ಅವರು ವಂದನೆ ಸಲ್ಲಿಸಿದರು.

## ವಚನ ಕಂಠ ಪಾಠ ಮತ್ತು ಭಾಷಣ ಸ್ಪರ್ಧೆ

ಮೈಸೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ದಿ. ೭.೮.೦೫ರಂದು ಹೂಟಗಳ್ಳಿಯ ಒಡನಾಡಿ ಸೇವಾ ಸಂಸ್ಥೆಯ ಆಶ್ರಯದಲ್ಲಿ ಏರ್ಪಡಿಸಿದ್ದ ವಚನ ಕಂಠಪಾಠ ಮತ್ತು ಭಾಷಣ ಸ್ಪರ್ಧೆಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರಾದ ಶ್ರೀ ಎ.ಎಸ್. ನಾಗರಾಜು ಅವರು ಉದ್ಘಾಟಿಸಿದರು. ಜಿಲ್ಲಾ ಘಟಕದ ಅಧ್ಯಕ್ಷರೂ, ಮೈಸೂರು ವಿಶ್ವವಿದ್ಯಾಲಯದ ಗಾಂಧಿಭವನದ ನಿರ್ದೇಶಕರೂ ಆದ ಡಾ. ಎಸ್. ಶಿವರಾಜಪ್ಪ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಒಡನಾಡಿ ಸಂಸ್ಥೆಯ ನಿರ್ದೇಶಕರಾದ ಶ್ರೀ ಸ್ಟ್ಯಾನ್ಲಿ ಪರಶು ಅವರು ಸಂಘ–ಸಂಸ್ಥೆಗಳ ಪರಸ್ಪರ ಸಹಕಾರಗಳು ಅಗತ್ಯವನ್ನು ತಿಳಿಸಿದರು. ಪರಿಷತ್ತಿನ ಜಿಲ್ಲಾ ಘಟಕದ ಶ್ರೀಮತಿ ಮಂಗಳಾ ಮುದ್ದು ಮಾದಪ್ಪ, ಶ್ರೀಮತಿ ಜಯಂತಿ ಅಶೋಕ್ ಮತ್ತು ಶ್ರೀ ಜಯಪ್ಪ ಹೊನ್ನಾಳಿ ಅವರು ತೀರ್ಪುಗಾರರಾಗಿದ್ದರು. ಸ್ಪರ್ಧಾ ವಿಜಯಿಗಳಿಗೆ ಬಹುಮಾನಗಳನ್ನು ವಿತರಿಸಲಾಯಿತು.

ವರದಿ : ಡಾ. ಎಸ್. ಶಿವರಾಜಪ್ಪ





**ದಾವಣಗೆರೆ ಜಿಲ್ಲೆ**



ನುಗ್ಗಿಹಳ್ಳಿ ಗ್ರಾಮದ ಶರಣೆ ಚಂದಮ್ಮ ಅವರ ಮನೆ ಅಂಗಳದಲ್ಲಿ ನಡೆಸಿದ ೨೦ನೇ ಮಾಸಿಕ ಮಹಾ ಮನೆ: ಪಾಂಡೋಮಟ್ಟಿ ವಿರಕ್ತ ಮಠದ ಪೂಜ್ಯ ಶ್ರೀ ಗುರುಬಸವ ಸ್ವಾಮಿಗಳು ಮತ್ತು ಚನ್ನಗಿರಿ ಹಾಲಸ್ವಾಮಿ ವಿರಕ್ತ ಮಠದ ಪೂಜ್ಯ ಶ್ರೀ ಜಯದೇವ ಸ್ವಾಮಿಗಳ ನೇತೃತ್ವ, ತಾಲ್ಲೂಕು ಘಟಕದ ಅಧ್ಯಕ್ಷ ಹೆಚ್.ಎಸ್. ಮಲ್ಲಿಕಾರ್ಜುನಪ್ಪ ಅವರ ಅಧ್ಯಕ್ಷತೆ, ಜಿಲ್ಲಾ ಘಟಕದ ಅಧ್ಯಕ್ಷ ಚಿಕ್ಕೋಳ್ ಈಶ್ವರಪ್ಪ ಅವರಿಂದ ಪ್ರಾಸ್ತಾವಿಕ ಭಾಷಣ, ಕಾಕನೂರು ವಿನಾಯಕ ಪ್ರೌಢಶಾಲಾ ಮುಖ್ಯೋಪಾಧ್ಯಾಯರಾದ ಕೆ. ಬಸವರಾಜಪ್ಪ, ಎಂ.ಯು. ಚನ್ನಬಸಪ್ಪ, ಡಿ. ರಮೇಶ್, ವಿ. ಬಸವರಾಜಪ್ಪ ಮಾತನಾಡಿದರು. ಕೆ.ಎಸ್. ನಾಗರಾಜ್ ಸ್ವಾಗತಿಸಿದರು. ಜಿ.ಎಂ. ಓಂಕಾರಪ್ಪ ನಿರೂಪಿಸಿ ಬಿ.ಎಂ. ನಿಜಲಿಂಗಪ್ಪ ಶರಣು ಸಮರ್ಪಿಸಿದರು.

ವರದಿ : ಚಿಕ್ಕೋಳ್ ಈಶ್ವರಪ್ಪ

**ಗದಗ ಜಿಲ್ಲೆ**



ಶಿರಹಟ್ಟಿ ತಾಲ್ಲೂಕು ಕದಳಿ ಮಹಿಳಾ ವೇದಿಕೆ : ಲಕ್ಷ್ಮೇಶ್ವರದಲ್ಲಿ ೭೦ನೆಯ ವಚನ ಚಿಂತನ – ಶಕುಂತಲಾ ಶೆಟ್ಟಿ ಅವರ ಮನೆ, ಸಾವಿತ್ರಮ್ಮ ಹೂವಿನ ಅವರ ಅಧ್ಯಕ್ಷತೆ, ಚಂಪಕ್ಕ ಮೆಣಸಿನಕಾಯಿ ಅವರು ಅತಿಥಿಗಳು, ಮೇಘಾ ಹುಕ್ಕೇರಿ ಅವರಿಂದ ವಚನ ವಾಚನ, ರಾಜೇಶ್ವರಿ ಪಾಟೀಲ ಅವರಿಂದ ವ್ಯಾಖ್ಯಾನ.

ವರದಿ : ಪ್ರೇಮಕ್ಕ ಬಿಂಕದಕಟ್ಟಿ

**ಹಾವೇರಿ ಜಿಲ್ಲೆ**



ಹಾವೇರಿಯ ಗುರುಮಾತೆ ಮಂಗಳಾ ಮಾಸೂರ ಮನೆಯಲ್ಲಿ ೩೦ನೇ ಮಾಸಿಕ ವಚನ ಚಿಂತನ : ಮಹಾಲಿಂಗಪ್ಪ ಮಾಸೂರ ಅವರಿಂದ ಉದ್ಘಾಟನೆ. ವೇದಿಕೆಯಲ್ಲಿ : ಶಿವಬಸಪ್ಪ ಹತ್ತಿ, ಬಸಮ್ಮ ಹಳಕೊಪ್ಪ, ಲಲಿತ ಮಳಗಿ ಮತ್ತಿತರರು. ವಚನ ವಿಶ್ಲೇಷಣೆ : ಶೈಲಜಾ ಕೋರಿಶೆಟ್ಟರ, ಪ್ರಾಸ್ತಾವಿಕ ನುಡಿ : ಪ್ರೇಮಕ್ಕ ಶೆಟ್ಟರ

ವರದಿ : ಹನುಮಂತಗೌಡ ಗೊಲ್ಲರ

**ಜಾಣರ ದೇವ**

ತಾನಾರೆಂಬುದಕ್ಕುತ್ತರ
ಅರಿವು ತಾನೆಂಬುದು.
ಅರುಹಿನ ಕುರುಹನರಿ
ವವನೇ ಜಾಣರ ದೇವನು !

–ನಾ.ಮ. ಬಸವರಾಜಯ್ಯ

## ಹಾವೇರಿ ಜಿಲ್ಲೆ




ಹಾವೇರಿ ಜಿಲ್ಲೆ ರಾಣಿಬೆನ್ನೂರಲ್ಲಿ ಶರಣ ಸಾಹಿತ್ಯ ಪರಿಷತ್ತಿನ ಕದಳಿ ವೇದಿಕೆಯ ಮಾಸಿಕ ವಚನ ಚಿಂತನ ಮಂಥನ ಗೋಷ್ಠಿ. ಉದ್ಘಾಟಕರು: ಪೂಜ್ಯ ಶ್ರೀ ಗುರುಬಸವ ಸ್ವಾಮೀಜಿ, ವೇದಿಕೆಯಲ್ಲಿ : ಕಮಲಾ ದೇಶಪಾಂಡೆ, ಸುನಂದಾ ತಿಳವಳ್ಳಿ, ವೇದಿಕೆ ಅಧ್ಯಕ್ಷೆ ಸುವರ್ಣಾದೇವಿ ವಿ.ಎನ್. ಪಾಟೀಲ, ಜಿ.ಪಂ. ಸದಸ್ಯೆ ಕಮಲಾ ನಾಯ್ಕ ಮತ್ತಿತರರು. ವಚನ ವಿಶ್ಲೇಷಣೆ : ಸರಳಾ ಜಂಬಿಗಿ
ವಚನ ಗಾಯನ : ಭಾರತಿ ಜಂಬಿಗಿ



ಹಾವೇರಿ ತಾಲ್ಲೂಕು ಕದಳಿ ಮಹಿಳಾ ವೇದಿಕೆ–೩೧ನೇ ಮಾಸಿಕ
ವಚನ ಚಿಂತನ : ಮನೆ : ಶ್ರೀಮತಿ ಸೌಭಾಗ್ಯ ಆರಾಧ್ಯ
ಅಧ್ಯಕ್ಷತೆ : ಬಸಮ್ಮ ಹಳಕೊಪ್ಪ
ಅತಿಥಿಗಳು : ಶ್ರೀಮತಿ ಜಯಶ್ರೀ ಶಿವಪೂರ, ರಾಜೇಶ್ವರಿ ಸಂಪಿಗೆಮಠ
ವಚನ ವಿಶ್ಲೇಷಣೆ : ಶ್ರೀಮತಿ ಮಂಗಳಾ ಮಾಸೂರ



ಹಾನಗಲ್ಲು ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತಿನ ಕಾರ್ಯಚಟುವಟಿಕೆಗಳನ್ನು ಮಾಜಿ ಸಚಿವ ಸಿ.ಎಂ. ಉದಾಸಿ ಉದ್ಘಾಟಿಸಿದರು. ಸಾನ್ನಿಧ್ಯ : ಹುಬ್ಬಳ್ಳಿ ಮೂರು ಸಾವಿರ ಮಠದ ಪೂಜ್ಯ ಜಗದ್ಗುರುಗಳು, ಅಕ್ಕಿ ಆಲೂರ ಹಾಗೂ ಬಮ್ಮನಹಳ್ಳಿ ಶ್ರೀಗಳು. ಸಮಾರಂಭದಲ್ಲಿ ಬೆಲ್ಲದ ಹಾಗೂ ಹನುಮಂತಗೌಡ ಗೊಲ್ಲರ, ವ್ಹಿ.ಪಿ. ಗಣಿಪ್ಪನವರ ಮತ್ತಿತರರು ಪಾಲ್ಗೊಂಡಿದ್ದರು.







ಹಾವೇರಿ ಜಿಲ್ಲೆ

## ರಾಣಿಬೆನ್ನೂರಲ್ಲಿ ಕದಳಿ ವೇದಿಕೆಯ ವಾರ್ಷಿಕೋತ್ಸವ




ಉದ್ಘಾಟಕರು : ಪ್ರೊ. ಇ.ಎಸ್. ಮಡಿವಾಳರ, ಸಾನ್ನಿಧ್ಯ : ಪೂಜ್ಯ ಶ್ರೀ ಗುರುಬಸವ ಸ್ವಾಮೀಜಿ
ಅಧ್ಯಕ್ಷತೆ : ಶಕುಂತಲಮ್ಮ ಜಂಬಿಗಿ, ಅತಿಥಿಗಳು : ಬಸಮ್ಮ ಹಳಕೊಪ್ಪ, ಮಾರುತಿ ಶಿಡ್ಲಾಪುರ, ಎಸ್.ಜಿ. ಹಿರೇಮಠ
ಪ್ರಾಸ್ತಾವಿಕ : ಸುವರ್ಣಾದೇವಿ ಪಾಟೀಲ

## ಹಾವೇರಿಯಲ್ಲಿ ೩೨ನೆಯ ಮಾಸಿಕ ವಚನ ಚಿಂತನ



ಕರ್ಜಗಿ ಗೌರಿಮಠದ ಪೂಜ್ಯ ಶಿವಯೋಗಿ ಶಿವಾಚಾರ್ಯ ಸ್ವಾಮಿಗಳಿಂದ ಉದ್ಘಾಟನೆ. ನಗರಸಭಾಧ್ಯಕ್ಷ ಪರಶುರಾಮ ಅಡಕಿ ಅವರಿಗೆ ಸನ್ಮಾನ.
ಅಧ್ಯಕ್ಷತೆ : ಶ್ರೀಮತಿ ಬಸಮ್ಮ ಹಳಕೊಪ್ಪ
ಅತಿಥಿಗಳು : ನ್ಯಾಯವಾದಿ ಎಸ್. ಎಸ್. ರಾಮಲಿಂಗಣ್ಣವರ, ಹನುಮಂತಗೌಡ ಗೊಲ್ಲರ, ಕಸಾಪದ ಸಿ.ಎಸ್. ಮರಳಿಹಳ್ಳಿ,
ಉಪಸ್ಥಿತರು : ಶಾಂಭವಿ ಮಹಿಳಾ ಸದಸ್ಯರು
ಉಪನ್ಯಾಸ : ಸರೋಜಾ ರಾಯರ







## ಪರಿಷತ್ತಿನ ಪ್ರಕಟಣೆಗಳು

| | | ರೂ.ಗಳು |
|---|---|---|
| 1. | ವಚನ ಸಾಹಿತ್ಯ | 50.00 |
| 2. | ವಚನ ವಾಙ್ಮಯ ಮತ್ತು ಭಾಷೆ | 50.00 |
| 3. | ವಚನ ಸಾಹಿತ್ಯ ಮತ್ತು ಮಹಿಳೆ | 50.00 |
| 4. | ಅಕ್ಕಮಹಾದೇವಿ | 50.00 |
| 5. | ಶಿವಯೋಗಿ ಸಿದ್ಧರಾಮ | 50.00** |
| 6. | ಚನ್ನಬಸವಣ್ಣ | 50.00** |
| 7. | ಫ.ಗು. ಹಳಕಟ್ಟಿ | 25.00** |
| 8. | ಶರಣರು ಮತ್ತು ಸಂತರು | 30.00** |
| 9. | ಕದಳಿ ಬನ (ವಚನ ಸಂಗ್ರಹ) | 10.00 |
| 10. | ಅನುಭವ ಮಂಟಪ (ಇಂಗ್ಲಿಷ್, ಹಿಂದಿ, ತೆಲುಗು, ಕನ್ನಡ, ತಮಿಳು) | ತಲಾ 10.00 |
| 11. | Dimensions of Bhakti Movement in India | 200.00 |
| 12. | ವೀರಶೈವ ದೀಪ್ತಿ : ಸಾಹಿತ್ಯ ಚಿಂತನ | 100.00 |
| 13. | ವೀರಶೈವ ದೀಪ್ತಿ : ಗೋಷ್ಠಿಚಿಂತನ | 20.00 |
| 14. | ವೀರಶೈವ ದೀಪ್ತಿ : ತತ್ವಚಿಂತನ | 30.00** |
| 15. | Veerashaiva Deepti | 25.00 |
| 16. | ಶರಣ ಕಿರಣ | 50.00 |
| 17. | ಲದ್ದೆಯ ಸೋಮಣ್ಣ | 15.00 |
| 18. | ಜೇಡರ ದಾಸಿಮಯ್ಯ | 50.00 |
| 19. | ಸ್ವರ ವಚನಗಳು | 60.00 |
| 20. | ಬೆಂಗಳೂರು ನಗರದ ವೀರಶೈವ ಮಠಗಳು | 400.00 |
| 21. | Western Scholars on Basaveshwara | 40.00 |
| 22. | ಶರಣ ತತ್ವಚಿಂತನ-4 (ಚಿಕ್ಕಮಗಳೂರು ಸಮ್ಮೇಳನದ ಪ್ರಬಂಧಗಳ ಸಂಕಲನ) | 75.00 |
| 23. | ಶರಣ ತತ್ವಚಿಂತನ-5 (ಬೆಳಗಾಂ ಸಮ್ಮೇಳನದ ಪ್ರಬಂಧಗಳ ಸಂಕಲನ) | 100.00 |
| 24. | ಶರಣ ತತ್ವಚಿಂತನ-6 (ರಾಯಚೂರು ಸಮ್ಮೇಳನದ ಪ್ರಬಂಧಗಳ ಸಂಕಲನ) | 100.00 |
| 25. | ಶರಣ ತತ್ವಚಿಂತನ-7 (ಬಾಗಲಕೋಟೆ ಸಮ್ಮೇಳನದ ಪ್ರಬಂಧಗಳ ಸಂಕಲನ) | 120.00 |
| 26. | ಜನದನಿ | 60.00 |
| 27. | ಶರಣ ಪ್ರಸಂಗ | 20.00 |
| 28. | ಜಾನಪದ ಸಾಹಿತ್ಯದಲ್ಲಿ ಶರಣರು | 20.00 |
| 29. | ಶೂನ್ಯ ಸಂಪಾದನೆ : ಚಿಂತನೆ-ಮರುಚಿಂತನೆ | 200.00 |
| 30. | ಶರಣ ರೇಖೆ | 30.00 |
| 31. | ಸರ್ವಜ್ಞನ ವಚನಗಳು - ಒಂದು ಜಾನಪದೀಯ ಅಧ್ಯಯನ | 100.00 |
| 32. | ಶರಣುಬನ್ನಿ ಜಲಕಾಯಕಕೆ | 30.00 |
| 33. | ಸುರಿಹೊಂಡ ಭರತಖಂಡ | 30.00 |
| 34. | ಸ್ಮರಣೀಯರು | 200.00 |
| 35. | ಗ್ರಾಮರಾಜ್ಯ | 50.00 |
| 36. | Sharana Vani-Gurubani | 50.00 |
| 37. | ಹರಿಹರನ ರಗಳೆಗಳಲ್ಲಿ ಭಕ್ತಿ | 50.00 |
| 38. | ಜಗದಗಲ ಮುಗಿಲಗಲ (ಧ್ವನಿ ಸುರುಳಿ) | 35.00 |
| 39. | ಶರಣವಾಹಿನಿ (ಸಿ.ಡಿ.) | 250.00 |

** ಪ್ರತಿಗಳು ಮುಗಿದಿವೆ.

ಪುಸ್ತಕಗಳು ದೊರೆಯುವ ಸ್ಥಳ :

**ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು**

ಶಿವರಾತ್ರೀಶ್ವರ ವೃತ್ತ, ೧ನೆಯ ಮುಖ್ಯರಸ್ತೆ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦ ೦೭೦

MAHAMANE

Magazine Registration No. RNI 68294/97 -
Postal Registration No. CPMG/KA/BGS - 167/2003-05
Posted at Jayanagar H.P.O. on 5th of every month

September - 2005



Published by : **Akhila Bharatha Sharana Sahithya Parishat (Regd.)**
1st Main, Shivarathrishwara Cricle, 8th Block, Jayanagar, Bangalore - 560 070
Printed by : **Lakshmi Mudranalaya,** 5th Main, Chamarajpet, Bangalore - 560 018
Editors : **M.G. Nagaraj and H.S. Siddagangappa**